ಕಾಯಕವೇ ಕೈಲಾಸ



# ಸಿದ್ಧಗಂಗಾ



ಸಂಪುಟ : ೪೫ ಆಗಸ್ಟ್ ೨೦೦೮ ಸಂಚಿಕೆ : ೮




ಜುಲೈ ೭ ರಂದು ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯ ತುಮಕೂರು ಶಾಖೆಯು ಪೂಜ್ಯ ಶ್ರೀ ಶ್ರೀಗಳವರ ದಿವ್ಯಸಾನ್ನಿಧ್ಯದಲ್ಲಿ ಏರ್ಪಡಿಸಿದ್ದ ರೆಡ್‌ಕ್ರಾಸ್ ಭವನದ ಉದ್ಘಾಟನೆಯನ್ನು ಕರ್ನಾಟಕದ ಘನತೆವೆತ್ತ ರಾಜ್ಯಪಾಲರಾದ ಶ್ರೀ ಹಂಸರಾಜ್ ಭಾರದ್ವಾಜ್ ಅವರು ನೆರವೇರಿಸಿದರು. ಸಚಿವ ಶ್ರೀ ಎಸ್. ಸುರೇಶ್‌ಕುಮಾರ್ ಅವರು ಸ್ಮರಣ ಸಂಚಿಕೆಯನ್ನು ಲೋಕಾರ್ಪಣೆ ಮಾಡಿದರು. ಈ ಸಂದರ್ಭದಲ್ಲಿ ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯ ಅಧ್ಯಕ್ಷರು ಹಾಗೂ ಜಿಲ್ಲಾಧಿಕಾರಿಗಳಾದ ಡಾ. ಸಿ. ಸೋಮಶೇಖರ್ ಮೊದಲಾದ ಗಣ್ಯರು ಉಪಸ್ಥಿತರಿದ್ದರು



ಘನತೆವೆತ್ತ ನೂತನ ರಾಜ್ಯಪಾಲರಾದ ಶ್ರೀ ಹಂಸರಾಜ್ ಭಾರದ್ವಾಜ್ ಅವರು ಶ್ರೀಮಠಕ್ಕೆ ಭೇಟಿ ನೀಡಿ ಪೂಜ್ಯ ಶ್ರೀ ಶ್ರೀಗಳವರಿಗೆ ಭಕ್ತಿ ಸಮರ್ಪಣೆ ಮಾಡುತ್ತಿರುವುದು



ಪರಮಪೂಜ್ಯ ಶ್ರೀಗಳವರು ರಾಜ್ಯಪಾಲರನ್ನು ಸನ್ಮಾನಿಸಿ ಆಶೀರ್ವದಿಸಿದರು. ಈ ಸಂದರ್ಭದಲ್ಲಿ ತುಮಕೂರು ಜಿಲ್ಲಾಧಿಕಾರಿ ಡಾ. ಸಿ. ಸೋಮಶೇಖರ್ ಉಪಸ್ಥಿತರಿದ್ದರು



ಅಂತರಂಗ




ಸಂಪಾದಕ :
ಹೆಚ್.ವಿ. ವೀರಭದ್ರಯ್ಯ

ಸಹ ಸಂಪಾದಕ :
ಎಚ್.ಎಸ್. ಸಿದ್ಧಗಂಗಪ್ಪ

ಸಂಚಾಲಕ :
ಎಂ. ರೇಣುಕಾರಾಧ್ಯ

ಪ್ರಕಾಶಕರು:
ಹೆಚ್.ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿಗಳ ಸಂಘ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -572 104.

ಮುದ್ರಕರು:
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ
ಆಫ್‌ಸೆಟ್ ಮುದ್ರಣಾಲಯ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು -572 104.

ವಿಳಾಸ :
"ಸಂಪಾದಕರು"
'ಸಿದ್ಧಗಂಗಾ' ಮಾಸಪತ್ರಿಕೆ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -572 104




॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥

ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಸೆನು ಬಸವೇಶ

# ಸಿದ್ಧಗಂಗಾ


ಸಂಪುಟ : ೪೫ ಆಗಸ್ಟ್ ೨೦೦೮ ಸಂಚಿಕೆ : ೮


## ಒಳಪುಟಗಳಲ್ಲಿ ..................






ಚಂದಾ ವಿವರ : ವಾರ್ಷಿಕ ಚಂದಾ ರೂ. ೧೨೦/-
ಆಜೀವ ಸದಸ್ಯತ್ವ ರೂ. ೧೦೦೦/- ಬಿಡಿ ಪ್ರತಿ ರೂ. ೧೦.೦೦

ಓಂ

## ಶ್ರೀ ಸಿದ್ಧಲಿಂಗೇಶ್ವರ ವಚನ

**ಆದಿಯ ಅಂಗನೆಯ ಉದರದಲ್ಲಿ ಒಂದದ್ಭುತದ**
**ಕಿಚ್ಚು ಹುಟ್ಟಿ**
**ಮೂರು ಹಂಸೆಯ ನುಂಗಿ ಮುಪ್ಪುರವ ಸುಟ್ಟು**
**ಆರೂಢಪದದಲ್ಲಿ ನಿಂದ**
**ಅದ್ವಯ ಲಿಂಗೈಕ್ಯನನೇನೆಂದುಪಮಿಸುವೆನಯ್ಯ**
**ಮಹಾಲಿಂಗುರು ಶಿವಸಿದ್ಧೇಶ್ವರ ಪ್ರಭುವೇ.**

ಅನಾದಿಯಾದ ಪರಬ್ರಹ್ಮದಿಂದೆ ಪುಷ್ಪಪರಿಮಳದ ಹಾಂಗೆ ಆದಿಯಾಗಿ ತೋರಲ್ಪಟ್ಟ ಶಿವಶರಣನ ಚಿದ್ಗರ್ಭದಲ್ಲಿ ಅತ್ಯಾಶ್ಚರ್ಯವಾದ ಶಿವಜ್ಞಾನಾಗ್ನಿಯೊಂದುದಯವಾಗಿ, ಲಿಂಗತ್ರಯ ಸ್ವರೂಪದಿಂದಾತ್ಮತ್ರಯವನವ ಗ್ರಹಿಸಿ, ತನುತ್ರಯಂಗಳ ವರ್ತನೆಯನ್ನು ಸಂಸ್ಕರಿಸಿ, ಎಲ್ಲಾ ಪದಂಗಳಿಗುಪರಿಯಾಗೊಪ್ಪಲ್ಪಟ್ಟ ಮಹಾಲಿಂಗ ಪದಲ್ಲಿ ಶಿಖಿಕರ್ಪೂರದಂತೆ, ನಿರ್ಧಾರವಾಗೆರಡಳಿದ ಸಮರಸೈಕ್ಯ ವನಂತಿಂತೆಂದುಪಮಿಸಬಾರದು.

(ಕೃಪೆ : ಷಟ್‌ಸ್ಥಲಜ್ಞಾನಿ ಸೋಮಶೇಖರಶಿವಯೋಗಿಕೃತ ತೋಂಟದ ಸಿದ್ಧಲಿಂಗೇಶ್ವರನ ಷಟ್‌ಸ್ಥಲ ಜ್ಞಾನಸಾರಾಮೃತದ ಬೆಡಗಿನ ವಚನದ ಟೀಕೆ – ವೀರಶೈವ ಅಧ್ಯಯನ ಸಂಸ್ಥೆ- ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ – ಡಂಬಳ- ಗದಗ)

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ನಿಮ್ಮನಾಮದ ನೆನಹು ಎನ್ನ ಮನವನುತುಂಬಿ
ಸುಮ್ಮಾನ ಸಿಹಿಯ ನೀಡುವುದು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸಕಲವ ಪೂಜಿಸಿ ನಿಷ್ಕಲ ನೀನಾದೆ
ನಿಷ್ಕಲಪೂಜಿಸಿ ನಿಜವಾದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

'ಸತ್ಯಮುಕ್ತಿಯ ಕಳೆಯೆ' ನಿತ್ಯಸತ್ಯದ ಪ್ರಭೆಯೆ
ಭೃತ್ಯಾಚಾರದ ಬುವಿಭಾಗ್ಯ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಹಸಿವು ನೀರಡಿಕೆಗಳ ಗೆದ್ದು ನಿಂದಿರುವಂಥ
ರಸಜಗದ ಋಷಿರೂಪ ಶಿವರವಿ । ಸ್ವರಿಸುವ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿಂದಿಪರ ನೆರಳಲ್ಲಿ ಮಚ್ಚರಿಪರಮಡಿಲಲ್ಲಿ
ಹೊಯ್ದು ಬೈಯ್ಯುವರಲ್ಲಿ ಬಾಳಿಸು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಹಾಡುವೆ ನಿಮ್ಮನೆ ಬೇಡುವೆ ನಿಮ್ಮನೆ
ಕಾಡುವೆನು ಕೊನೆತನಕ ನಿಮ್ಮನೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಹಾವಾಗಿ ಬದುಕದಿರು ಹೂವಾಗಿ ನೀ ಅರಳು
ಮೂರು ದಿನವಾದರು ಲೇಸಹುದು । ತಾನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

'ಸಕಲ ಸಮಯಪ್ರೀತ' ಮಾನವೋನ್ನತ ತಾತ
ಭೂತಾಯಿ ಹಡೆದ ಸಂಪೂತ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಹಮ್ಮು ಬಿಮ್ಮಿಲ್ಲದ ಮುಚ್ಚು ಮರೆಯಿಲ್ಲದ
ತೆರೆದ ಸಂಪುಟವಾಯ್ತು ನಿನ್ನಚರಿತ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಭಾವಭವ್ಯವು ನೀವು ದೇವದಿವ್ಯವು ನೀವು
ಅನುಭಾವದನುಪಮ ಶಿವನೀವು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

– ಹೆಚ್.ವಿ. ವೀರಭದ್ರಯ್ಯ





## ಹಣದ ಬಳಕೆ

ನಮ್ಮ ಪೂಜ್ಯ ಗುರುಗಳಾದ ನಿರಂಜನಪ್ರಭು ಶ್ರೀ ಉದ್ದಾನಮಹಾಸ್ವಾಮಿಗಳ ವರಿಂದ ಕಲಿತದ್ದು ಅಪಾರ. ಲೌಕಿಕ ಪಾರಮಾರ್ಥಗಳೆರಡನ್ನು ಸಮಸಮವಾಗಿ ತೂಗಿಸಿಕೊಂಡು ಹೋಗುವುದನ್ನು ತೋರಿಸಿಕೊಟ್ಟ ಮಹಾನುಭಾವರು ಪೂಜ್ಯರು. ಪೂಜಾನಿಷ್ಠೆ, ದಾಸೋಹನಿಷ್ಠೆ, ವ್ಯವಹಾರ ಕುಶಲತೆ, ಸ್ವಾಮಿತ್ವದ ಸೂಕ್ಷ್ಮತೆ, ಸಂಸ್ಥೆಯ ಆಡಳಿತ ವಿಧಾನ, ವ್ಯಕ್ತಿತ್ವದ ವಿಕಸನ, ಜಾತ್ಯಾತೀತ ಮನೋಧರ್ಮ, ಸರ್ವಜೀವ ದಯಾಪರತೆ, ಹಣದ ಗಳಿಕೆ-ಬಳಕೆ ಮುಂತಾದುವುಗಳನ್ನು ಹೇಳಿ ಕಲಿಸಲಿಲ್ಲ, ಆಚರಿಸುತ್ತ ಕಲಿಸಿದ ದಯಾವಿಭುಗಳು. ಅವರು ತೋರಿಸಿದ ಗುರುಪಥದಲ್ಲಿ ನಡೆಯುತ್ತಿರುವುದಷ್ಟೇ ನಾವಿಂದು ಕಂಡುಕೊಂಡಿರುವ ಪುಣ್ಯಮಾರ್ಗ.

ಶ್ರೀಮಠ ಇಂದು ಬೃಹತ್ತಾಗಿ ಬೆಳೆದಿದೆ. ಅದು ಗುರುಕಾರುಣ್ಯದ ಫಲ. ಸಂಸ್ಥೆಯ ಸೇವೆಯೂ ದಿನದಿನಕ್ಕೆ ವಿಸ್ತರಿಸುತ್ತಿದೆ. ದಾಸೋಹ ನಿರಂತರ ನಡೆದಿದೆ. ಭಕ್ತ ಜಗತ್ತು ಮುಕ್ತವಾಗಿ ಧನ, ಧಾನ್ಯ, ವಸ್ತುಗಳ ರೂಪದಲ್ಲಿ ನೀಡುತ್ತ ಬಂದಿರುವುದನ್ನು ಸ್ಮರಿಸುತ್ತೇವೆ. ದಾನಿಗಳು, ಅಭಿಮಾನಿಗಳು, ಸರ್ಕಾರ ನೀಡಿದುದನ್ನು ಬಳಸುವಾಗ ಎಚ್ಚರ ವಹಿಸಲೇಬೇಕಲ್ಲವೇ? 'ಹಾಗೆ ಬಂತು ಹೀಗೆ ಹೋಯ್ತು' ಎನ್ನುವಂತಾಗಬಾರದಲ್ಲವೇ? ಸಂಸ್ಥೆಯ ಸೇವೆಯನ್ನು ಕಂಡು ಭಕ್ತಾದಿಗಳು ಕೊಟ್ಟುದನ್ನು ಹೇಗೆಂದರೆ ಹಾಗೆ ಖರ್ಚು ಮಾಡಬಾರದಲ್ಲವೇ? ಅದು ನಮ್ಮಲ್ಲಿ ಯಾವಾಗಲೂ ಒಳದನಿಯಾಗಿ ಮಾತಾಡುತ್ತಲೇ ಇರುತ್ತದೆ. ಶ್ರೀಮಠದ ಸೇವಾ ಸಿಬ್ಬಂದಿ ವರ್ಗದವರು, ವಿವಿಧ ಶಾಲಾ ಕಾಲೇಜುಗಳ ಮುಖ್ಯಸ್ಥರು, ಕಟ್ಟಡ ನಿರ್ಮಾಣದಲ್ಲಿ ತೊಡಗಿರುವ ಅಧಿಕಾರಿಗಳು, ಹಣದ ಮುಂಜೂರಾತಿಗಾಗಿ ನಮಗೆ 'ಬಿಲ್ಲು'ಗಳನ್ನು ಸಲ್ಲಿಸಿದಾಗ ಅವುಗಳನ್ನು ಮುಂಜೂರು ಮಾಡುವಲ್ಲಿ ವಿಳಂಬವಾಗುತ್ತದೆ. ಬಿಲ್ಲುಗಳನ್ನು ಪಾಸು ಮಾಡಿಸಿಕೊಳ್ಳುವಲ್ಲಿ ಸಂಬಂಧಿಸಿದವರು ಮೂರು ನಾಲ್ಕು ಬಾರಿ ನಮ್ಮನ್ನು ಕಾಣುತ್ತಲೇ ಇರುತ್ತಾರೆ. ಅವರಿಗೆ ಅನ್ನಿಸುವುದುಂಟು. ಮಠದ ಕೆಲಸ ಕಾರ್ಯಗಳಿಗೂ ನಾವು ನಿಧಾನಿಸುತ್ತೇವಲ್ಲ ಎಂಬುದಾಗಿ. ಅದು ಸಹಜ ಕೂಡ. ಆದರೆ ಸಾರ್ವಜನಿಕರಿಂದ ಬಂದ ಹಣ ತುಂಬಾ ಪವಿತ್ರವಾದುದು. ಅದನ್ನು ಖರ್ಚು ಮಾಡುವಲ್ಲಿ ಪೂರ್ವಾಪರ ಚಿಂತನೆ ಮಾಡಲೇ ಬೇಕಾಗುತ್ತದೆ. ಸಂಪನ್ಮೂಲಗಳ ಸಮಾಲೋಚನೆ ಅಗತ್ಯವಾಗುತ್ತದೆ. ಅದರಿಂದಾಗಿ ವಿಳಂಬವಾಗುತ್ತದೆ. ಸ್ವಾಮಿಗಳಿಂದ ಹಣ ಪಡೆಯುವುದು ಸುಲಭವಲ್ಲ ಎಂದುಕೊಳ್ಳು ವುದು ಸಹಜ, ಸ್ವಾಭಾವಿಕ. ಆದರೆ 'ಹಣವನ್ನು ನೀರಿನಂತೆ ಗಳಿಸಬೇಕು, ತೀರ್ಥದಂತೆ ಬಳಸಬೇಕು' ಎಂಬ ಅನುಭವವಾಣಿ ನಮಗೆ ಗುರು ತೋರಿದ ದಾರಿದೀಪ.

*

# ಆತ್ಮಾವಲೋಕನ

ಸ್ವಾತಂತ್ರ್ಯ ಪಡೆದು ಆರು ದಶಕಗಳು ಮುಗಿದು ಹೋದವು. ದೇಶ ಕಂಡ ಕನಸು ಕನಸಾಗಿಯೇ ಉಳಿಯುವಂತಾಗಿದೆ. ದೇಶಭಕ್ತಿಯನ್ನು ಇಂದು ಹಗಲು ಹೊತ್ತು ಪಂಜು ಹಿಡಿದುಕೊಂಡು ಹುಡುಕಬೇಕಾಗಿದೆ. ಎಲ್ಲರೂ ದೇಶದ ಆಡಳಿತ ಸೂತ್ರವನ್ನು ಹಿಡಿದಿಡುವವರು ದೇಶದ ಅಭಿವೃದ್ಧಿಯನ್ನು ಕುರಿತು ಸಂವಿಧಾನಾತ್ಮಕವಾದ ಸಭೆಯ ಒಳಗೆ ಹೊರಗೆ ಮಂತ್ರದಂತೆ ಜಪಿಸುತ್ತಿದ್ದಾರೆ. ಆದರದು ಜರಡಿಯಲ್ಲಿ ನೀರು ಹಿಡಿದಂತಾಗುತ್ತಿದೆ. ಮಾತಿಗೂ ಕೃತಿಗೂ ಮಧ್ಯೆ ಪ್ರಾಮಾಣಿಕತೆಯ ಬಹುದೊಡ್ಡ ಕಂದರಗಳು ನಿರ್ಮಾಣವಾಗಿವೆ. ಮೊನ್ನೆ ಪತ್ರಿಕೆಗಳಲ್ಲಿ ಪ್ರಕಟವಾದ ಒಂದು ಸುದ್ದಿ ಹೀಗಿತ್ತು. ರಾಜ್ಯದ ಪ್ರತಿಯೊಬ್ಬ ಪ್ರಜೆಯ ಮೇಲೂ ಹನ್ನೊಂದು ಸಾವಿರ ಸಾಲದ ಹೊರೆಯಿದೆ. ರಾಷ್ಟ್ರದ ಪ್ರತಿಯೊಬ್ಬ ಪ್ರಜೆಯ ಮೇಲೆ ಮೂವತ್ತೊಂದು ಸಾವಿರ ಸಾಲದ ಹೊರೆಯಿದೆ. ಸ್ವಾತಂತ್ರ್ಯ ಬಂದ ಮೇಲೆ ನಮ್ಮ ಜನ ನಾಯಕರು, ರಾಜ್ಯ ರಾಷ್ಟ್ರವನ್ನಾಳಿದವರು ಕೊಟ್ಟ ಉಡುಗೊರೆಯಿದಾಗಿದೆ.

ಇನ್ನು, ಇಂದು ಆಹಾರ ಧಾನ್ಯಗಳ ಬೆಲೆ ಗಗನಗಾಮಿಯಾಗಿದೆ. ಅಕ್ಕಿ ನಲವತ್ತು ರೂ ಒಂದು ಕೆ.ಜಿ.ಗೆ ತೊಗರಿಬೇಳೆ ನೂರೈವತ್ತು ರೂ ಕೆ.ಜಿ.ಗೆ. ಎಣ್ಣೆಯ ಬೆಲೆ ವಿಪರೀತವಾಗಿದೆ. ಸಾಮಾನ್ಯವರ್ಗದ, ಮಧ್ಯಮ ವರ್ಗದ ಜನತೆ ಕಂಗಾಲಾಗಿದ್ದಾರೆ. ಗೃಹಿಣಿಯರ ಗೋಳು ಕೇಳುವವರಿಲ್ಲವಾಗಿದೆ. ನೌಕರಿಯಲ್ಲಿರುವವರು ತತ್ತರಿಸುತ್ತಿದ್ದಾರೆ. ಗ್ರಾಮ ಬಂಧುಗಳ ದುಃಸ್ಥಿತಿಯನ್ನು ಕೇಳುವವರಿಲ್ಲವಾಗಿದೆ. ಬಸ್ಸಿನ ದರ ಹೆಚ್ಚಳವಾಗಿದೆ. ಶಾಲಾ ಕಾಲೇಜುಗಳ, ತಾಂತ್ರಿಕ ಹಾಗೂ ವೈದ್ಯಕೀಯ ಫೀಜುಗಳು ದಿನದಿನಕ್ಕೆ ಏರುತ್ತಲೇ ಇವೆ. ಭ್ರಷ್ಟಾಚಾರ ಜೀವನ ಶೈಲಿಯಾಗಿ ಹೋಗಿದೆ. ಭ್ರಷ್ಟರಲ್ಲದವರು ಯಾರು ? ಎಂದು ಸಂಶೋಧನೆ ಮಾಡುವಂತಾಗಿದೆ. ರಾಜಕೀಯ ಪಕ್ಷಗಳು ಹೆಸರಿಗೆ ಸಿದ್ಧಾಂತಗಳನ್ನು ರೂಪಿಸಿಕೊಂಡಿವೆ. ಆದರೆ ಜಾತಿ, ಹಣ, ಅಧಿಕಾರಗಳ ದೌರ್ಬಲ್ಯಗಳಿಂದ ಮುಕ್ತವಾಗಿಲ್ಲ. ಒಬ್ಬನ ಕೈ ಮತ್ತೊಬ್ಬನ ಜೇಬಿನಲ್ಲಿ ಎಂಬಂತಾಗಿದೆ. ಜನಪ್ರಿಯತೆ ಎಂಬ ಅರ್ಬುದ ರೋಗ, ಮಾನ, ಸನ್ಮಾನ, ಪ್ರಶಸ್ತಿ, ಪುರಸ್ಕಾರಗಳೆಂಬುವು ಮಾನಿಷ್ಠರಿಗೆ 'ಅಬ್ಬಳಿಕೆ'ಯಾಗುವಂತಾಗಿವೆ. ಸ್ವಾತಂತ್ರ್ಯವೆಂಬುದು ಗುರುತರವಾದ ಜವಾಬ್ದಾರಿ ಎಂಬುದನ್ನು ಮರೆತು ಹೇಗೆಂದರೆ ಹಾಗೆ ವರ್ತಿಸಬಹುದು ಎಂಬ ಮನೋಧರ್ಮ ಎಲ್ಲೆಲ್ಲೂ ಕಾಣಬರುತ್ತಿದೆ. ಸ್ವಾತಂತ್ರ್ಯ ತಂದುಕೊಟ್ಟ ಪುಣ್ಯಾತ್ಮರು ಇಂಥದನ್ನು ನಿರೀಕ್ಷಿಸಿದ್ದರೆ ? ಆತ್ಮಾವಲೋಕನ ಇಂದು ಎಲ್ಲರಿಗೂ ಅಗತ್ಯ.

–ಸಂಪಾದಕ





# ವಿಶ್ವಸಂಸ್ಕೃತಿಗೆ ವೀರಶೈವ ಸಂಸ್ಕೃತಿಯ ಕಾಣಿಕೆ

–ಪ್ರೊ. ಡಿ. ಜವರೇಗೌಡ, ಮಾಜಿ ಉಪ ಕುಲಪತಿಗಳು, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

ಇತಿಹಾಸ ಪೂರ್ವ ಕಾಲದಿಂದಲೂ ಮಾನವ ಸಮಾಜವನ್ನು ಆಳುತ್ತಿರುವ ಪ್ರಚಂಡ ಶಕ್ತಿಯೆಂದರೆ ಮತ. ಪ್ರಾರಂಭದಲ್ಲಿ ಮೂಢ ಸಂಪ್ರದಾಯಗಳನ್ನು ತಿರಸ್ಕರಿಸಿ, ಮಾರಿಮಸಣಿ ಭೂತಾದಿ ಬಹುದೇವತೋಪಾಸನೆಯನ್ನು ನಿರಾಕರಿಸಿ, ಏಕದೇವತಾರಾಧನೆಯ ಮೂಲಕ ಮನುಕುಲದ ಐಕ್ಯವನ್ನು ಮತ ಸಾಧಿಸಿತಾದರೂ, ಕಾಲಾನಂತರದಲ್ಲಿ ಅದು ಪುರೋಹಿತಶಾಹಿಯ ಆಕ್ಟೊಪಸ್ ಹಿಡಿತಕ್ಕೆ ಸಿಕ್ಕಿಕೊಂಡು ಶೋಷಣೆಯ ಅಸಮಾನತೆಯ, ಹಾಗೂ ಸ್ವಾತಂತ್ರ್ಯಾಪಹರಣದ ಸಾಧನವಾಗಿ ಮಾನವನ ಮಹಾಶತ್ರುವಾಗಿ ಪರಿಣಮಿಸಿದ್ದೊಂದು ದುರಂತ. ಅದನ್ನೇ ಧರ್ಮಗ್ಲಾನಿಯೆಂದು ಹಿಂದಿನವರು ಕರೆದದ್ದುಂಟು. ಅದರಿಂದಾಗಿ ಜೀವನ ಸಮಸ್ತವೂ ಅಪಾಯದ ಅಂಚಿನಲ್ಲಿರುವಾಗ ನೈಸರ್ಗಿಕಾವಶ್ಯಕತೆ ಎನ್ನುವಂತೆ ಬುದ್ಧ, ಕ್ರಿಸ್ತ ಮಹಮ್ಮದ, ಬಸವಣ್ಣ ಮೊದಲಾದ ವಿಭೂತಿಪುರುಷರು ಜನ್ಮವೆತ್ತಿ ಪರಂಪರೆಯ ಹಿನ್ನೆಲೆಯಲ್ಲಿ ಹೊಸ ಧರ್ಮವನ್ನು ಹುಟ್ಟುಹಾಕಿ, ಅದರ ಬುನಾದಿಯ ಮೇಲೆ ರಾಜಕೀಯಾರ್ಥಿಕ ಸಾಮಾಜಿಕ ಸುಧಾರಣೆಗಳನ್ನು ರೂಪಿಸಿ, ಲೋಕಕಲ್ಯಾಣವನ್ನು ಸಾಧಿಸುತ್ತಾರೆ.

ಬಸವಣ್ಣನವರು ಹುಟ್ಟಿದಾಗ, ಅಸ್ಪೃಶ್ಯತಾದೋಷದಿಂದ, ಜಾತಿ ರೋಗದಿಂದ, ಕುತ್ಸಿತ ದೇವತೆಗಳ ಪೂಜೆಯಿಂದ, ಪುರೋಹಿತರ ಶೋಷಣೆಯಿಂದ, ರಾಜರ ಅಂತಃಕಲಹಗಳಿಂದ ಛಿದ್ರ ವಿಚ್ಛಿದ್ರವಾಗಿದ್ದ ಸಮಾಜ ಅಪಾಯದ ಅಂಚಿನಲ್ಲಿತ್ತು. ದೇಶದ ಸ್ಥಿತಿ ಅಭದ್ರವಾಗಿತ್ತು. ಎಳವೆಯಲ್ಲಿಯೇ ವೇದೋಪನಿಷತ್ತು ಪುರಾಣಾಗಮಗಳನ್ನು ಜೀರ್ಣಿಸಿಕೊಂಡಿದ್ದ ಅವರಿಗೆ ವೇದಾಗಮ ಪುರಾಣಗಳು ಅಸಮಾನತೆಯ, ಶೋಷಣೆಯ, ಪುರೋಹಿತಶಾಹಿಯ ಆಧಾರಗಳೆಂದು, ರಕ್ಷಾಕವಚಗಳೆಂದು ತೋರಲಾಗಿ, ಕಾರ್ಯವಿನಾಶಕ್ಕೆ ಕಾರಣ ವಿನಾಶವೇ ತಕ್ಕುದಾದ ಮದ್ದೆಂದು ಬುದ್ಧಿಯಿಂದ ಗ್ರಹಿಸಿ, ವಿವೇಕದಿಂದ ನಿಶ್ಚಯಿಸಿ, ಅವುಗಳನ್ನು ಸಂಪೂರ್ಣವಾಗಿ ತಿರಸ್ಕರಿಸುತ್ತಾರೆ.

*ವೇದಕ್ಕೆ ಒರೆಯ ಕಟ್ಟುವೆ, ಶಾಸ್ತ್ರಕ್ಕೆ ನಿಗಳವನಿಕ್ಕುವೆ*
*ತರ್ಕದ ಬೆನ್ನ ಬಾರೆತ್ತುವೆ, ಆಗಮದ ಮೂಗ ಕೊಯಿವೆ ನೋಡಯ್ಯ*
*ಮಹದಾನಿ ಕೂಡಲಸಂಗಮದೇವಾ,*
*ಮಾದರ ಚನ್ನಯ್ಯನ ಮನೆಯ ಮಗ ನಾನಯ್ಯಾ*

ಹೊಸ ಧರ್ಮ ಸ್ಥಾಪನೆಗೆ, ನವ ಸಮಾಜ ನಿರ್ಮಾಣಕ್ಕೆ ಪೂರ್ವಭಾವಿಯಾಗಿ ಹಳತರ ನಿರ್ಮೂಲನ ಅನಿವಾರ್ಯವೆಂದು ತಿಳಿದ ವಚನಕಾರರೆಲ್ಲರೂ ಏಕಪ್ರಕಾರವಾಗಿ ಹಿಂದಿನ ಪವಿತ್ರ ಗ್ರಂಥಗಳ ಮೇಲೆ ದಾಳಿ ನಡೆಸುತ್ತಾರೆ. ಅಲ್ಲಮಪ್ರಭು

*ವೇದವೆಂಬುದು ಓದಿನ ಮಾತು*
*ಶಾಸ್ತ್ರವೆಂಬುದು ಸಂತೆಯ ಸುದ್ದಿ*
*ಪುರಾಣವೆಂಬುದು ಪುಂಡರ ಗೋಷ್ಠಿ*
*ತರ್ಕವೆಂಬುದು ತಗರ ಹೋರಟೆ*
*ಭಕ್ತಿಯೆಂಬುದು ತೋರುಂಬ ಲಾಭ*
*ಗುಹೇಶ್ವರನೆಂಬುದು ಮೀರಿದ ಘನವು*

ಎಂದು ಘೋಷಿಸಿದರೆ ಅಕ್ಕಮಹಾದೇವಿ

*ವೇದಶಾಸ್ತ್ರಾಗಮ ಪುರಾಣಗಳೆಂಬುವ*
*ಕೊಟ್ಟಣವ ಕುಟ್ಟುತ್ತ ನುಚ್ಚು ತೌಡು ಕಾಣಿ ಭೋ*

ಎಂದು ತಿರಸ್ಕಾರದಿಂದ ಕಾಣುತ್ತಾಳೆ.

ಹಿಂದೂ ಧರ್ಮದ ತಳಹದಿ ವರ್ಣಾಶ್ರಮ ಪದ್ಧತಿಯೆಂಬುದರಲ್ಲಿ ಲವಲೇಶವೂ ಸಂದೇಹವಿಲ್ಲ. ಆ ಪದ್ಧತಿಯಲ್ಲಿ ದ್ವೇಷ ಮಾತ್ಸರ್ಯಗಳ ಅತೃಪ್ತಿ ಅಸಮಾನತೆಗಳ ಹುತ್ತವನ್ನು ಭರತಖಂಡದ ದೌರ್ಬಲ್ಯ ಪತನಗಳನ್ನು ಬುದ್ಧನೂ ಗುರುತಿಸುತ್ತಾನೆ. ಜಗತ್ತಿನ ಎಲ್ಲ ಕೇಡೊಳಿತುಗಳಿಗೆ ಮನಸ್ಸೇ ಕಾರಣವಾದ್ದರಿಂದ, ಅದರ ಶಿಕ್ಷಣವೇ ಧರ್ಮದ ಗುರಿಯಾಗಬೇಕೆಂದೂ, ನಿಜವಾದ ಧರ್ಮ ತತ್ವಾಚರಣೆಯೇ ಹೊರತು, ಪವಿತ್ರ ಗ್ರಂಥಗಳಲ್ಲಿಲ್ಲವೆಂದೂ, ಮತಿಯೊಂದೇ ಸಕಲ ಜೀವನ ವ್ಯಾಪಾರಗಳ ಕೇಂದ್ರವಾಗಬೇಕೆಂದೂ ಅವನು ಬೋಧಿಸುತ್ತಾನೆ.

ಸಾಮಾನ್ಯರನ್ನು ದೂರವಿರಿಸಿ, ಅಜ್ಞಾನ ಮೌಢ್ಯಗಳನ್ನು ಪೋಷಿಸಿ, ದೇಶವನ್ನು ದುರ್ಗತಿಗಿಳಿಸಿದ 'ಪವಿತ್ರ ಗ್ರಂಥ'ಗಳ ಭಾಷೆಯನ್ನು ಬುದ್ಧ–ಬಸವರಿಬ್ಬರೂ ತಿರಸ್ಕರಿಸಿದ್ದರಲ್ಲಿ ಲೋಕಕಾರುಣ್ಯದ ಜತೆಗೆ ಅದ್ಭುತ ವಿವೇಕವಿತ್ತೆಂಬುದನ್ನು ಸಾವಿರಾರು ವರ್ಷಗಳಿಂದ ದಾಸ್ಯದ ನೊಗವನ್ನು ಹೊತ್ತಿದ್ದು ಇದೇ ತಾನೆ ಸ್ವಾತಂತ್ರ್ಯದ ಉಷಃಕಾಲದಲ್ಲಿ ಬದುಕಿರುವ ವಿದ್ಯಾವಂತರು ಅರಿಯದಿರುವುದು ಆಶ್ಚರ್ಯದ ಸಂಗತಿ. ವಿನೂತನ ಸಂಸ್ಕೃತಿಯ ನಿರ್ಮಾಣದಲ್ಲಿ, ನವಸಮಾಜ ರಚನೆಯಲ್ಲಿ, ನಾಡಿಗೆ ಭದ್ರತೆಯನ್ನೊದಗಿಸುವಲ್ಲಿ ಶ್ರೀಸಾಮಾನ್ಯ ಪ್ರಮುಖ ಪಾತ್ರವನ್ನು ವಹಿಸಿಕೊಳ್ಳಬೇಕೆಂಬ, ಅದು ಸಾಧ್ಯ

ವಾಗಬೇಕಾದರೆ ಅವನ ಭಾಷೆಯೇ ಸರ್ವಮಾಧ್ಯಮವಾಗಬೇಕೆಂಬ, ಎಂಥ ಮಂದಮತಿಗಾದರೂ ಅರ್ಥವಾಗಬಹುದಾದ ಸತ್ಯ ಆಧುನಿಕ ಮೇಧಾವಿಗಳಿಗೆ ಎಟುಕದಿರುವುದು ವಿಚಾರ ದಾರಿದ್ರ್ಯಕ್ಕೆ ನಿದರ್ಶನವಾಗಿದೆ. ಬಸವಣ್ಣ ಅಲ್ಲಮರು ಪುರೋಹಿತ ಭಾಷೆಯನ್ನು ತ್ಯಜಿಸಿ, ಶ್ರೀಸಾಮಾನ್ಯರ ಭಾಷೆಯನ್ನು ಕೈಗೆತ್ತಿಕೊಂಡದ್ದರಿಂದಲೇ ಸಮಗ್ರ ಕ್ರಾಂತಿಯನ್ನು ರೂಪಿಸುವಲ್ಲಿ, ಶ್ರೀಸಾಮಾನ್ಯರನ್ನೊಳಗೊಂಡ ನವಸಮಾಜವನ್ನು ಕಟ್ಟುವಲ್ಲಿ ಯಶಸ್ವಿಯಾದರೆನ್ನುವುದಂತು ಸಾರ್ವಕಾಲಿಕ ಸತ್ಯವಾಗುಳಿದಿದೆ.

ಸಮಾಜ ಭದ್ರತೆಗೆ ಹಾಗೂ ಏಕತೆಗೆ ಸರ್ವ ಸಮಾನತೆಯನ್ನೊಪ್ಪಿಕೊಂಡ ಮತ ಹಾಗೂ ಏಕದೇವತಾರಾಧನೆ ಅತ್ಯಗತ್ಯವೆಂಬುದು ವಚನಕಾರರ ವಿವೇಕದ ಅನುಭವ. 'ಮಡಕೆ ದೈವ, ಮೊರ ದೈವ, ಬೀದಿಯ ಕಲ್ಲು, ದೈವ... ದೈವ ದೈವವೆಂದು ಕಾಲಿಡಲಿಂಬಿಲ್ಲ. ದೈವನೊಬ್ಬನೆ ಕೂಡಲ ಸಂಗಮದೇವಾ' ಹಾಳು ಮೊರಡಿಗಳಲ್ಲಿ, ಊರದಾರಿಗಳಲ್ಲಿ... ಮನೆಯ ಮಾಡಿ ಕರೆವೆಮ್ಮ ಹಸುಗೂಸು ಬಸುರಿ ಬಾಣಂತಿ ಕುಮಾರಿ ಕೊಡಗೂಸೆಂಬವರ ಹಿಡಿದು ತಿಂಬ, ತಿರಿದುಂಬ ಮಾರಯ್ಯ ಬೀರಯ್ಯ ಕೇತಯ್ಯರಾದಿಗಳ ಪೂಜೆ ಸಲ್ಲದೆಂದು' ಬಸವಣ್ಣ ಹೇಳುತ್ತಾರೆ. 'ಅರಗು ತಿಂದು ಕರಗುವ ದೈವವ, ಉರಿಯ ಕಂಡಡೆ ಮುರುಟುವ ದೈವವನೆಂತು ಸರಿಯೆಂಬೆನಯ್ಯ' ಎಂದವರು ಅಣಕಿಸುತ್ತಾರೆ. 'ಊರೊಳಗೊಬ್ಬ ದೇವ, ಅಡವಿಯಲೊಬ್ಬ ದೇವ, ಮಡುವಿನಲೊಬ್ಬ ದೇವ, ಮಡಿಲಲೊಬ್ಬ ದೇವ' ಎಂದು ಅಲ್ಲಮಪ್ರಭು ವಿಡಂಬಿಸುತ್ತಾರೆ. ಕಲ್ಲುಮರ ಭೂತ ಬೇತಾಳಗಳನ್ನು ಪೂಜಿಸಿದ ಭಕ್ತರು ಕಲ್ಲು ಮರ ಭೂತ ಬೇತಾಳಗಳೆ ಆಗುತ್ತಾರೆಂಬುದು ಮನೋವೈಜ್ಞಾನಿಕ ಸತ್ಯ.

*ಯಾಂತಿ ದೇವವ್ರತಾ ದೇವಾನ್ ಪಿತೃನ್ ಯಾಂತಿ*
*ಪಿತೃವ್ರತಾಃ ।*
*ಭೂತಾನಿ ಯಾಂತಿ ಭೂತೇಜ್ಯಾಯಾಂತಿ*
*ಮದ್ಯಾಜಿನೋಽಪಿಮಾಮ್*

ಗೀತಾ 9–25

ಮಾರಿ ಮಸಣಿಯರಿಗಾಗಿ ಹೊರಗೆ ಹುಡುಕಬೇಕಾಗಿಲ್ಲ. ಅವು ಅಜಾಗರೂಕ ಮಾನವನ ಅಂತರಂಗದಲ್ಲಿಯೇ ಮನೆ ಮಾಡಿಕೊಂಡಿವೆಯೆಂಬ ಬಸವಣ್ಣನವರ ಮಾತು ನಿತ್ಯಸತ್ಯ.

*ಮಾರಿಮಸಣಿಯೆಂಬವು ಬೇರಿಲ್ಲ ಕಾಣಿರೋ !*
*ಮಾರಿಯೆಂಬುದೇನು ?*
*ಕಂಗಳು ತಪ್ಪಿ ನೋಡಿದಡೆ ಮಾರಿ,*
*ನಾಲಗೆ ತಪ್ಪಿ ನುಡಿದಡೆ ಮಾರಿ.*
*ನಮ್ಮ ಕೂಡಲಸಂಗಮದೇವರ ನೆನಹ ಮರೆದಡೆ*
*ಮಾರಿ!*

ಮತ್ತೊಂದರ್ಥದಲ್ಲಿ ಮಾನವನ ಮನೋಧರ್ಮವೇ ಹೊರಗಿನ ಮಾರಿಮಸಣಿಯರ ರೂಪದಲ್ಲಿ ಮೈದೋರಿದೆಯೆಂದರೂ ತಪ್ಪಾಗದು.

ಆರಾಧ್ಯ ಆರಾಧಕರ ನಡುವಣ ದಬ್ಬಾಳಿಕೆಯೇ ಪುರೋಹಿತ. ದೇವರ ಕೃಪೆಯಾಗಲಿ, ಭಕ್ತನ ಭಕ್ತಿಯಾಗಲಿ ಮಾರಾಟದ ವಸ್ತುವೇನು? ಭಗವತ್ಸಾಕ್ಷಾತ್ಕಾರವಾಗಲಿ, ಲಿಂಗಾಂಗ ಸಾಮರಸ್ಯವಾಗಲಿ ಜೀವಾತ್ಮ ಪರಮಾತ್ಮರ ನೇರ ಸಂಬಂಧವಾಗಬೇಕೇ ಹೊರತು, ಅನ್ಯರ ಮೂಲಕ ಸಾಧಿಸಬಹುದಾದ ಲಾಭವಲ್ಲ. 'ಹಸಿವಾದಡುಂಬುದನು, ಸತಿಯ ಸಂಭೋಗವನು ಆನಾಗಿ ನೀ ಮಾಡೆಂಬುವರುಂಟೆ? ತನ್ನಾಶ್ರಯದ ರತಿಸುಖವನು, ತಾನುಂಬ ಊಟವನು ಬೇರೆ ಮತ್ತೊಬ್ಬರ ಕೈಯಲ್ಲಿ ಮಾಡಿಸಬಹುದೆ?' ಎಂದು ಬಸವಣ್ಣನವರು ಪ್ರಶ್ನಿಸುತ್ತಾರೆ. 'ತನ್ನ ಲಿಂಗಕ್ಕೆ ಮಾಡುವ ನಿತ್ಯನೇಮವ ತಾ ಮಾಡಬೇಕಲ್ಲದೆ ಬೇರೆ ಮತ್ತೊಬ್ಬರ ಕೈಯಲ್ಲಿ ಮಾಡಿಸಬಹುದೇ?' ಎಂಬ ಅವರ ಪ್ರಶ್ನೆ ಎಷ್ಟು ವಿಚಾರಪೂರ್ಣವಾದುದು?

ಪುರೋಹಿತಸೃಷ್ಟಿಯಾದ ದೇವಾಲಯವೂ ಕಲೆಯ ಮರೆಯಲ್ಲಿ ಪೂಜೆಯ ಮುಸುಕಿನೊಳಗೆ ಹುದುಗಿರುವ ಅಜ್ಞಾನ ಮೌಢ್ಯಗಳ ಕೂಪ, ಶೋಷಣೆಯ ಗುಳ, ವರ್ಣ ಪದ್ಧತಿಯ ಮತ್ತು ಶುಷ್ಕ ಸಂಪ್ರದಾಯಗಳ ಬಿತ್ತನೆ ಕೋಠಿ. ದೇವಾಲಯ ಸಂಪ್ರದಾಯದ ಸಂಸ್ಕೃತಿಯ ವಿಧ್ವಂಸನದಿಂದಲ್ಲದೆ, ನವಸಮಾಜ ರಚನೆ ಸಾಧ್ಯವಿಲ್ಲವೆಂಬುದು ವಚನಕಾರರಿಗೆ ಗೊತ್ತಿತ್ತು. ಅಂಥ ವಿಧ್ವಂಸನ ಕಾರ್ಯಕ್ಕೂ ತಾತ್ವಿಕ ವಿವೇಚನೆಯೇ ದಾರಿದೀಪವಾಗುತ್ತದೆ. ಮತೀಯ ಇತಿಹಾಸದ ವಿಕಾಸದಲ್ಲಿ ನಿಸರ್ಗ ಶಕ್ತಿಗಳ ಆರಾಧನೆಯ ನಂತರದ ಹಂತವೇ ಮೂರ್ತಿಪೂಜೆ; ಸಾಕಾರ ನಿರಾಕಾರಗಳ ಸಂಗಮದಂತಿರುವ ಲಿಂಗಪೂಜೆಯ ಮೂಲಕ ದೇವಾಲಯದ ದೇವರು ದೇಹ ದೇವಾಗಾರಕ್ಕೆ ವರ್ಗಾವಣೆಗೊಳ್ಳುತ್ತಾನೆ. ಶೋಷಣೆಯ ಮಾಧ್ಯಮವನ್ನು ತಿರಸ್ಕರಿಸುವಾಗಲೇ ದೇಹ ದೇವಾಲಯದಲ್ಲಿ ಆತ್ಮಲಿಂಗವನ್ನು ಕಂಡುಕೊಂಡು, ಆಧ್ಯಾತ್ಮಿಕ ಇತಿಹಾಸದಲ್ಲಿ ಸರ್ವೋತ್ಕೃಷ್ಟ ಚಿರಂತನ ಮೌಲ್ಯವೊಂದನ್ನು ಸಂಸ್ಥಾಪಿಸಿದ ಕೀರ್ತಿ ವಚನಕಾರರಿಗೆ ಸಲ್ಲುತ್ತದೆ.

*ದೇಹವೇ ದೇವಾಲಯವಾಗಿದ್ದ ಮೇಲೆ*
*ಮತ್ತೆ ಬೇರೆ ದೇಗುಲಕ್ಕೆ ಎಡೆಯಾಡುವರಿಗೆ*
*ಏನು ಹೇಳುವೆನಯ್ಯ ?*
*ಗುಹೇಶ್ವರ, ನೀ ಕಲ್ಲಾದಡೆ ನಾನೇನಪ್ಪೆನು ?*





*ಕಲ್ಲ ಮನೆಯ ಮಾಡಿ, ಕಲ್ಲ ದೇವರ ಮಾಡಿ,*
*ಆ ಕಲ್ಲು ಕಲ್ಲ ಮೇಲೆ ಕೆಡೆದರೆ*
*ದೇವರೆತ್ತ ಹೋದರೋ ?*
*ಲಿಂಗಪ್ರತಿಷ್ಠೆಯ ಮಾಡಿದವಂಗೆ ನಾಯಕನರಕ*
*ಗೊಹೇಶ್ವರ*

ಅಲ್ಲಮಪ್ರಭು ಮೊದಲುಗೊಂಡು ಎಲ್ಲ ವಚನಕಾರರೂ ಈ ವಿಷಯದಲ್ಲಿ ಏಕಾಭಿಪ್ರಾಯವುಳ್ಳವರಾಗಿದ್ದಾರೆ. 'ದೇಹವೇ ದೇಗುಲ'ವೆಂದು, 'ಸ್ಥಾವರಕ್ಕಳಿವುಂಟು, ಜಂಗಮಕ್ಕಳಿವಿಲ್ಲ' ವೆಂದು ಬಸವಣ್ಣ ಸಹ ಸ್ಪಷ್ಟಪಡಿಸುತ್ತಾರೆ. 'ನೀ ಕಲ್ಲಾದಡೆ ನಾನೇನಪ್ಪೆನಯ್ಯಾ?' ಎಂದು ಪ್ರಭು ಪ್ರಶ್ನಿಸುತ್ತಾನೆ.

*ಮಠವೇಕೋ, ಪರ್ವತವೇಕೋ*
*ಜನವೇಕೋ, ನಿರ್ಜನವೇಕೋ*
*ಚಿತ್ತ ಸಮಾಧಾನವುಳ್ಳ ಶರಣಂಗೆ ?*
*ಮತ್ತೆ ಹೊರಗಣ ಚಿಂತೆ–ಧ್ಯಾನ ಮೌನ*
*ಜಪತಪವೇಕೋ ತನ್ನ ತಾನರಿದ*
*ಶರಣಂಗೆ, ಗುಹೇಶ್ವರ ?*

ಎನ್ನುವಲ್ಲಿ ಶರಣನಿಗೆ ಯಾವ ಹಂಗೂ ಬೇಡವಾಗುತ್ತದೆ.

*ಮರ್ತ್ಯಲೋಕದ ಮಾನವರು ದೇಗುಲದೊಳಗೊಂದು*
*ದೇವರು ಮಾಡಿದಡೆ ಆನು ಬೆರಗಾದೆನಯ್ಯ !*
*ನಿಚ್ಚಕ್ಕೆ ನಿಚ್ಚ ಅರ್ಚನೆ ಪೂಜನೆಯ ಮಾಡಿಸಿ*
*ಭೋಗವ ಮಾಡುವರ ಕಂಡು ನಾನು ಬೆರಗಾದೆನು!*
*ಗೊಹೇಶ್ವರ, ನಿಮ್ಮ ಶರಣನು ಹಿಂದೆ ಲಿಂಗವನಿರಿಸಿ*
*ಹೋದರು*

*ಒಟ್ಟಿದ್ದ ಮಣ್ಣಿಗೂ ನೆಟ್ಟಿದ್ದ ಕಲ್ಲಿಗೂ*
*ಕಟ್ಟಿದ್ದ ಲಿಂಗವಡಿಯಾಗಿ ಬೀಳುವ*
*ಲೊಟ್ಟಿ ಗುಡಿಹಿಗಳನೇನೆಂಬೆನಯ್ಯ ಕಲಿದೇವರ ದೇವಾ?*
*ಉಡಿಯಲಿಂಗವ ಬಿಟ್ಟು, ಗುಡಿಯ ಲಿಂಗಕ್ಕೆ ಶರಣೆಂಬ*
*ಗುಡಿಹಿಗಳನೇನೆಂಬೆನಯ್ಯ ಕಲಿದೇವರ ದೇವಾ ?*

ಎಂಬ ಅಲ್ಲಮನ ಮತ್ತು ಮಡಿವಾಳ ಮಾಚಯ್ಯನ ವಚನಗಳಲ್ಲಿ ದೇವಾಲಯ ನಿರಾಕರಣೆಯ ನಿರ್ಭಿಡೆಯ ಮನಸ್ಸು ಸುಸ್ಪಷ್ಟವಾಗಿದೆ. ಸದ್ಭಕ್ತರು ಸ್ಥಾವರಲಿಂಗವನ್ನು ಭಜಿಸಬಾರದೆಂಬುದೇ ಎಲ್ಲ ವಚನಕಾರರ ನಿಲುವು. ವರ್ಣಾಶ್ರಮ ಧರ್ಮವನ್ನೂ ಯಜ್ಞಯಾಗಾದಿಗಳನ್ನೂ ಖಂಡಿಸಿದಂತೆಯೇ ಸ್ಥಾವರಲಿಂಗಪೂಜೆ ಹಾಗೂ ದೇವಾಲಯ ನಿರ್ಮಾಣವನ್ನು ವಿನಯದ ಸೀಮೆಯನ್ನು ದಾಟಿ ಪರುಷ ವಾಕ್ಯಗಳ ಮೂಲಕ ಚುಚ್ಚುತ್ತಾರೆ.

*ಕಟ್ಟಿದ ಲಿಂಗವ ಬಿಟ್ಟು ಬೆಟ್ಟದ ಲಿಂಗಕ್ಕೆ ಹೋಗಿ*
*ಹೊಟ್ಟೆಯಡಿಯಾಗಿ ಬೀಳುವ ಲೊಟ್ಟೆ ಮೂಳನ ಕಂಡಡೆ*
*ಎಡದ ಪಾದರಕ್ಷೆಯ ತೆಗೊಂಡು ಲಟಲಟನೆ ಹೊಡಿ*
*ಎಂದಾತ ನಮ್ಮ ಅಂಬಿಗರ ಚೌಡಯ್ಯ*

ಮೌಢ್ಯಾಚರಣೆಗಳನ್ನು ಕಂಡಾಗ ವಚನಕಾರರ ಮೈಯೆಲ್ಲ ಉರಿಯುತ್ತದೆನ್ನುವುದಕ್ಕೆ ಇದೊಂದು ನಿದರ್ಶನ ಸಾಕು.

ಶರಣರ ದೃಷ್ಟಿಯಲ್ಲಿ ಲಿಂಗವೆಂಬುದು ಬರಿಯ ಕಲ್ಲಲ್ಲ; ಅದೊಂದು ಧರ್ಮದ ಸಂಕೇತ, ಶಿವನ ಪ್ರತೀಕ. 'ಕಲ್ಲನಾಗರ ಕಂಡರೆ ಹಾಲನೆರೆಯೆಂಬರು ದಿಟದ ನಾಗರ ಕಂಡರೆ ಕೊಲ್ಲೆಂಬರಯ್ಯ. ಉಂಬ ಜಂಗಮ ಬಂದರೆ ನಡೆಯೆಂಬರು, ಉಣ್ಣದ ಲಿಂಗಕ್ಕೆ ಬೋನವ ಹಿಡಿಯೆಂಬರಯ್ಯ' ಎಂಬ ವಿಡಂಬನಾತ್ಮಕ ವಚನದಲ್ಲಿಯೂ ಇದೇ ಅರ್ಥ ಧ್ವನಿಸುತ್ತದೆ. 'ಅಪ್ರಮಾಣ, ಅಗಮ್ಯ, ಅಗೋಚರ, ಅಪ್ರತಿಮಲಿಂಗವೆ, ಕೂಡಲಸಂಗಮನೆ ಭಕ್ತನ ಕರಸ್ಥಲಕ್ಕೆ ಬಂದು ಚುಳುಕಾಗುತ್ತಾನೆ. ಇಷ್ಟಲಿಂಗದ ಪೂಜೆ ಆತ್ಮಲಿಂಗಾನುಭವದಲ್ಲಿ ಪರಿಣಾಮಗೊಳ್ಳಬೇಕೆಂಬುದು ಅವರ ನಿಲುವು ಪ್ರಾಯಶಃ ಅನುಭವ ಮಂಟಪದಲ್ಲಿ ಆ ಬಗ್ಗೆ ವಿಸ್ತಾರವಾಗಿ ಚರ್ಚೆ ನಡೆದಿರಬೇಕೆಂದು ಮುಂದಿನ ಸಿದ್ಧರಾಮನ ವಚನದಿಂದ ವ್ಯಕ್ತವಾಗುತ್ತದೆ.

*ಅಯ್ಯ ಕಾಯಲಿಂಗವೋ ? ಕಾಯದಲ್ಲಿ ಸಾರಿಪ್ಪ*
*ಲಿಂಗಲಿಂಗವೋ ?*
*ಪ್ರಾಣಲಿಂಗವೋ? ಪ್ರಾಣದಲ್ಲಿ ಸಾರಿಪ್ಪ ಲಿಂಗಲಿಂಗವೋ?*
*ಜ್ಞಾನಲಿಂಗವೋ? ಜ್ಞಾನದ ಮೊನೆಯಲ್ಲಿ*
*ಬೆಳಗುವ ಲಿಂಗಲಿಂಗವೋ*
*ಲಿಂಗ ಪ್ರಾಣ, ಪ್ರಾಣಲಿಂಗವೆಂತೆಂದರಿಯೆನು*
*ನಿಮ್ಮ ಕಾಯದ ಕರಸ್ಥಲವ ಸಾರಿದ ಲಿಂಗ,*
*ಪ್ರಾಣದೊಳಗೆ*
*ವೇದ್ಯವಾದ ಪರಿಯನುಪದೇಶಿಸಿ, ಕೃಪೆಯ ಮಾಡಾ*
*ಪ್ರಭುವೆ ಕಪಿಲಸಿದ್ಧಮಲ್ಲಿಕಾರ್ಜುನಾ*

ಅದು ಬೆಳಗಿನೊಳಗಣ ಮಹಾಬೆಳಗಾಗಬೇಕು. ಕೈಯಲ್ಲಿರುವ ಲಿಂಗ ಕಲ್ಲೆಂದು ಭ್ರಮಿಸಿದವನು ಕಲ್ಲೇ ಆಗುತ್ತನೆ. ಅದೇ ಪರಮಗಂತವ್ಯವಲ್ಲ. ಅದನ್ನು ಮರೆತು ಆತ್ಮಲಿಂಗವನ್ನು, ಮಹಾಬೆಳಗನ್ನು ಕಂಡಾಗಲೇ ಲಿಂಗಾಂಗ ಸಾಮರಸ್ಯ ಸನಿಹವಾಗುತ್ತದೆ.

–ಮುಂದುವರೆಯುತ್ತದೆ.

## ವಚನಗಳಲ್ಲಿ ವೈಜ್ಞಾನಿಕ ಅಂಶಗಳು

-ಡಾ|| ವ್ಹಿ.ಪಿ. ಬಾಗಲಕೋಟಿ,
ವಿಶ್ವಚೇತನ ಪ್ರಕಾಶನ, ಕಲ್ಯಾಣ್ ಹೌಸಿಂಗ
ಕಾಲೋನಿ, ಗೋಕಾಕ-೫೯೧೩೦೭.

**ಬಯಲು, ರೂಪ, ಶರಣ ಹಾಗೂ ಲಿಂಗಾನುಭವಿ**

*ಬಯಲ ರೂಪ ಮಾಡಬಲ್ಲಾತನೆ ಶರಣನು,*
*ಆ ರೂಪ ಬಯಲ ಮಾಡಬಲ್ಲಾತನೆ ಲಿಂಗಾನುಭವಿ,*
*ಬಯಲ ರೂಪ ಮಾಡಲರಿಯದಿದ್ದಡೆ ಎಂತು*
*ಶರಣನೆಂಬೆ?*
*ಆ ರೂಪಬಯಲು ಮಾಡಲರಿಯದಿದ್ದರೆ ಎಂತು*
*ಲಿಂಗಾನುಭವಿಯೆಂಬೆ ?*
*ಈ ಉಭಯ ಒಂದಾದಡೆ ನಿಮ್ಮಲ್ಲಿ ತೆರಹುಂಟೆ ?*
*ಕೂಡಲಸಂಗಮದೇವಾ.*

5ನೇ ಅಧ್ಯಾಯದಲ್ಲಿ ಉತ್ತಂಗಿ ಚೆನ್ನಪ್ಪನವರ ಕೃತಿಯಲ್ಲಿ ಹೇಳಿದ ಶೂನ್ಯ ಸಂಪಾದನೆಯನ್ನು ಅಧ್ಯಯನ ಮಾಡುತ್ತಿರುವಾಗ ಜಗತ್ತು, ಜೀವನೂ ಪರಬ್ರಹ್ಮನಂತೆ ಸತ್ಯ ವಸ್ತುಗಳೆಂದೂ ಕೊನೆಗೆ ಜೀವವೆಲ್ಲವೂ ಪರಬ್ರಹ್ಮನಲ್ಲಿ ಲೀನವಾಗಿ ಅವನಲ್ಲಿಯೇ ಅಡಗಿಕೊಂಡಿವೆ ಎಂದೂ ಪ್ರತಿಪಾದಿಸಲ್ಪಟ್ಟಿದೆ. ಬಸವಣ್ಣನವರ ಮತ್ತೊಂದು ವಚನದಲ್ಲಿ ವಿಶ್ವದಲ್ಲಿ ದೇವನನ್ನು ಕಾಣುತ್ತೇವೆ ಎಂದಿದ್ದಾರೆ. ಇನ್ನೊಂದು ವಚನದಲ್ಲಿ ವಿಶ್ವದ ಸಂಕೇತವೇ ಇಷ್ಟಲಿಂಗ ಎಂದೂ ಹೇಳಿದ್ದಾರೆ. ಇಷ್ಟಲಿಂಗ ದೇವನ ಸಂಕೇತವೂ ಹೌದು. ಹೀಗಿದ್ದಾಗ ಶರಣನು ದೇವನನ್ನು ಅಥವಾ ವಿಶ್ವವನ್ನು ಇಷ್ಟಲಿಂಗದಲ್ಲಿ ಕಾಣಬೇಕು ಅಂದರೆ ಬಯಲನ್ನು ರೂಪ(ಇಷ್ಟಲಿಂಗ) ಮಾಡಬೇಕು ಎಂದಾಯಿತು. ಬಯಲುರೂಪ ಮಾಡಲರಿಯದಿದ್ದರೆ, ಎಂತಹ ಶರಣ ಎಂದಿದ್ದಾರೆ ಅಣ್ಣನವರು, ದೇವನನ್ನು ವಿಶ್ವದಲ್ಲಿಯೂ, ವಿಶ್ವವನ್ನು ಅದರ ಸಂಕೇತವಾದ ಇಷ್ಟಲಿಂಗದಲ್ಲಿ ಕಾಣದಿದ್ದರೆ, ಅಂದರೆ ದೇವನ ಸ್ವರೂಪದ ಬಗ್ಗೆ ನೈಜವಾದ ಜ್ಞಾನವಿರದೆ ಆ ವಿಶ್ವ ಮತ್ತು ವಿಶ್ವ ಚೇತನವನ್ನು ಇವುಗಳ ಸಂಕೇತವಾಗಿ ಇಷ್ಟಲಿಂಗದಲ್ಲಿ ಕಾಣದೇ ಇದ್ದರೆ ಆ ವ್ಯಕ್ತಿಗೆ ಶರಣನೆಂದು ಹೇಗೆ ತಿಳಿಯುವುದು? ಎಂದು ಪ್ರಶ್ನಿಸಿದ್ದಾರೆ.

ಅದೂ ಅಲ್ಲದೆ, ಕರಸ್ಥಳದಲ್ಲಿಯ ಇಷ್ಟಲಿಂಗದ ಮುಖಾಂತರ ವಿಶ್ವವನ್ನೂ ಅಲ್ಲಿ ಪರಮಾತ್ಮ ಸ್ವರೂಪಿ ದೇವನನ್ನು ಕಾಣದೆ ಇದ್ದ ಪಕ್ಷಕ್ಕೆ ಅವನು ಲಿಂಗಾನುಭವಿ ಆಗುವುದು ಹೇಗೆ ಎಂದಿದ್ದಾರೆ ಬಸವಣ್ಣನವರು.

ಅಧ್ಯಾಯ 4ರಲ್ಲಿ ವಿಶ್ವವು ಶೂನ್ಯದಿಂದ ಹುಟ್ಟಿತು. ವಿಶ್ವದಲ್ಲಿ ಸೂಕ್ಷ್ಮಾತಿಸೂಕ್ಷ್ಮ ಜೀವವು ಹುಟ್ಟಿತು. ಈ ಜೀವವು ಕೊನೆಗೆ ವಿಶ್ವದೊಡನೆ ಲೀನವಾಗುತ್ತದೆ. ವಿಶ್ವದಲ್ಲಿಯೇ ದೇವನೂ ಇದ್ದಾಗ, ಆತ್ಮವು ದೇವನೊಡನೆ ಅಂದರೆ ಪರಮಾತ್ಮ(ವಿಶ್ವಾತ್ಮ) ದೊಡನೆ ಲೀನವಾಗುವಿಕೆಯೇ ರೂಪ ಬಯಲು ಮಾಡುವಿಕೆ. ಹೀಗೆ ರೂಪ ಬಯಲ ಮಾಡುವವನೇ ಲಿಂಗಾನುಭವಿ ಎನ್ನಬಹುದಲ್ಲವೇ? ಜೀವಾತ್ಮನು ಪರಮಾತ್ಮನಲ್ಲಿ ಲೀನವಾಗುವಿಕೆಯು ಲಿಂಗಾಂಗ ಸಾಮರಸ್ಯ. ಜೀವಾತ್ಮನನ್ನು ವಿಶ್ವದಲ್ಲಿ ಎಂದರೆ ಅದರ ಸಂಕೇತವಾದ ಇಷ್ಟಲಿಂಗದಲ್ಲಿ ಲೀನಮಾಡಬಲ್ಲಾತನೇ ಲಿಂಗಾನುಭವಿ.

ಸಂಕ್ಷಿಪ್ತವಾಗಿ ವಿಶ್ವದ, ದೇವನ, ಪ್ರತಿಬಿಂಬವನ್ನು ಇಷ್ಟಲಿಂಗದಲ್ಲಿ ಕಾಣುವಾತ ಶರಣನೆಂದೂ, ಇಷ್ಟಲಿಂಗದ ಬ್ರಹದ್ರೂಪವನ್ನಾಗಿ (ದೇವ) ವಿಶ್ವವ್ಯಾಪಿ, ಪರಮಾತ್ಮನನ್ನು ಕಾಣುವಾತ ಲಿಂಗಾನುಭವಿ ಎಂದೂ ಹೇಳಿದಂತಾಯಿತು. ಜೀವಾತ್ಮ (ಅಂಗಾಂಗ)ವನ್ನು ಪರಮಾತ್ಮ(ಲಿಂಗ)ದಲ್ಲಿ ಲೀನಗೊಳಿಸುವುದಕ್ಕೆ ಲಿಂಗಾಂಗ ಸಾಮರಸ್ಯವೆನ್ನಬಹುದಲ್ಲವೇ?

*

**ವಚನಗಳು**

ಎನಿಸು ಕಾಲ ಕಲ್ಲು ನೀರೊಳಗಿದ್ದಡೇನು
ನೆನೆದು ಮೃದುವಾಗಬಲ್ಲದೆ ?
ಎನಿಸು ಕಾಲ ನಿಮ್ಮ ಪೂಜಿಸಿ ಏವೆನಯ್ಯಾ
ಮನದಲ್ಲಿ ದೃಢವಿಲ್ಲದನ್ನಕ್ಕ ?
ನಿಧಾನವ ಕಾಯ್ದಿರ್ದ ಬೆಂತರನಂತೆ
ಅದರ ವಿಧಿ ಎನಗಾಯಿತ್ತು
ಕೂಡಲಸಂಗಮದೇವಾ
-ಬಸವಣ್ಣ





## ಗುರುಬಸವಣ್ಣನವರ ಲಿಗಳನೇ ಲಿಂಗೈಕ್ಯ ಸಂಸ್ಮರಣೆ

-ಯೋಗೀಶ್ ನಿರ್ವಿಕಲ್ಪ, ಬಿನ್ ಎಸ್.ವಾಸುದೇವ್, ಕುಚಲಕ್ಕೀ ಕೇರಿ, ಬಿ.ಹೆಚ್. ರಸ್ತೆ, ಶಿವಮೊಗ್ಗ-೫೭೭ ೨೦೧.

**ಜುಲೈ 26, ಶ್ರಾವಣ ಶುದ್ಧ ಪಂಚಮಿ ದಿನದಂದು ಶ್ರೇಷ್ಠ ದಾರ್ಶನಿಕರಾದ ಗುರುಬಸವಣ್ಣನವರು ಪರಮಾತ್ಮನ ಪರಮ ಬಯಲಿನೊಳಗೆ ಬಯಲಾದ ಪರಮಪವಿತ್ರದಿನವಾಗಿದೆ. ಈ ದಿನವನ್ನು ರಾಷ್ಟ್ರಾದ್ಯಂತ 'ಬಸವಪಂಚಮಿ'ಯನ್ನಾಗಿ ಆಚರಿಸಲಾಗುತ್ತಿದೆ.**

***ನಮ್ಮ ಮನಕ್ಕೆ ಅಂಟಿರುವ ಅಜ್ಞಾನವನ್ನು ಜ್ಞಾನದ ಬಲದಿಂದ ಹೋಗಲಾಡಿಸಿಕೊಳ್ಳಬೇಕು. ಜೀವ, ಜಗತ್ತು ಮತ್ತು ಈಶ್ವರಗಳ ನಡುವಿನ ಭಿನ್ನತೆಯಿಂದ ಬಂಧಿಸಿರುವ ನಾವುಗಳು ಅದರಿಂದ ಮುಕ್ತಗೊಳ್ಳಬೇಕು. ಪರಮಸತ್ಯದ ಜ್ಞಾನವನ್ನು ಪಡೆಯುವುದೇ ಬದುಕಿನ ಪರಮಗುರಿಯಾಗ ಬೇಕು. ಆ ಪರಮಸತ್ಯದ ಜ್ಞಾನವನ್ನು ಇಷ್ಟಲಿಂಗಯೋಗ ಧ್ಯಾನದ ಮೂಲಕ ಪಡೆಯಬಹುದು. ಈ ಎಲ್ಲಾ ದಿವ್ಯ ಆಶಯಗಳನ್ನು ಗುರುಬಸವಣ್ಣನವರ ದರ್ಶನಶಾಸ್ತ್ರದಲ್ಲಿ ಕಾಣಬಹುದು.***

ಹುಟ್ಟು-ಸಾವುಗಳ ನಡುವಿನ ಬದುಕಿನೊಳಗೆ ನಾವು ಅರಿಯಬೇಕಾದ ಪರಮಸತ್ಯದ ದರ್ಶನಶಾಸ್ತ್ರವನ್ನು ಲೋಕಕ್ಕೆ ನೀಡಿದ ಶ್ರೇಷ್ಠ ದಾರ್ಶನಿಕರು ಗುರುಬಸವಣ್ಣನವರು.

ಕಾಲಚಕ್ರದೊಳಗೆ ಬದುಕಿನ ಕ್ಷಣಗಳೆಲ್ಲವೂ ಕಳೆದು ಹೋಗುತ್ತಿದೆ. ಸಟೆಯ ಪ್ರಪಂಚದ ವ್ಯವಹಾರಗಳನ್ನೇ ಸತ್ಯವೆಂದು ನಮ್ಮ ಮನಸ್ಸು ಭಾವಿಸಿದೆ. ಈ ಭ್ರಮೆಯೇ ನಮ್ಮ ಮನಕ್ಕೆ ಅಂಟಿರುವ ಬಹುದೊಡ್ಡ ಭವರೋಗ. ಈ ಭವರೋಗದ ಪರಿಣಾಮದಿಂದ ನಾವು ಪರಮಸತ್ಯದ ಜ್ಞಾನವನ್ನು ಮರೆತಿದ್ದೇವೆ. ಮೊದಲು ನಾವು ನಮ್ಮ ಮನಸ್ಸಿಗೆ ಅಂಟಿರುವ ಅಜ್ಞಾನ(ಭ್ರಾಂತಿ)ಯನ್ನು ಜ್ಞಾನದಬಲದಿಂದ ಹೋಗಲಾಡಿಸಿ ಕೊಳ್ಳಬೇಕು. ಜೀವ, ಜಗತ್ತು ಮತ್ತು ಈಶ್ವರಗಳ ನಡುವಿನ ಭಿನ್ನತೆಯಿಂದ ಬಂಧಿಸಿರುವ ನಾವುಗಳು ಅದರಿಂದ ಮುಕ್ತ ಗೊಳ್ಳಬೇಕು. ಮುಕ್ತಗೊಂಡಾಗ ಮಾತ್ರ ಪೂರ್ಣತ್ವದ ಆನಂದ ಕಾಣಲು ಸಾಧ್ಯ. ಅದುವೇ ಜೀವನ್ಮುಕ್ತಿ ಅರ್ಥಾತ್ ಲಿಂಗೈಕ್ಯ ವಾಗಿದೆ. ಆ ಪರಮಸತ್ಯದ ಜ್ಞಾನವನ್ನು ನಾವು 'ಇಷ್ಟಲಿಂಗ ಯೋಗಧ್ಯಾನ' ದಿಂದ ಪಡೆಯಬಹುದು. ಆ ಪರಮಜ್ಞಾನ ಪಡೆಯುವುದೇ ನಮ್ಮ ಬದುಕಿನ ಪರಮಗುರಿಯಾಗಿದೆ. ಈ ಎಲ್ಲಾ ಆಶಯಗಳನ್ನು ಗುರುಬಸವಣ್ಣನವರು ಪ್ರತಿಪಾದಿಸಿದ ದರ್ಶನಶಾಸ್ತ್ರದಲ್ಲಿ ಕಾಣಬಹುದು.

ಬದುಕಿನ ಪ್ರತಿಯೊಂದು ಹೆಜ್ಜೆಗಳಲ್ಲಿಯೂ ಪರಮಾತ್ಮನ ಇರುವಿಕೆಯ ನಿಜಾನುಭವವನ್ನು ಪಡೆದುಕೊಂಡಿದ್ದ ಅವರು ಪರಮಾತ್ಮನನ್ನು ಸರ್ವಾಂಗದಲ್ಲಿಯೂ ವ್ಯಾಪಿಸಿಕೊಂಡು 'ಲಿಂಗಮಯಿ' ಎನಿಸಿಕೊಂಡವರು. ಅವರು ಉಪದೇಶಿಸಿದ ದರ್ಶನಶಾಸ್ತ್ರದ ಮೂಲಕ ಸಾಧಕರು ಜೀವಭಾವದಿಂದ ಮುಕ್ತರಾಗಬಹುದು. ತನುಮನಭಾವಗಳಿಗೆ ಅತೀತವಾದ ಅಧ್ಯಾತ್ಮಾನುಭಾವ (Meta-physics) ಸಹ ಪಡೆಯಬಹುದು. ಅಂತಹ ಉನ್ನತ ಆಧ್ಯಾತ್ಮಾನುಭಾವದ ಶಿಖರವನ್ನೇರಿದ ಅವರೊಳಗೆ ಪರಮಾತ್ಮನ ಘನತತ್ವವೋ ಅಥವಾ ಘನತತ್ತ್ವ ಅವರೊಳಗೆಯೋ' ಎಂಬ ಸಂಶಯ ಅಂದು ಅಸಂಖ್ಯಾತ ಶರಣಸಮೂಹದಲ್ಲಿ ಬಿಡಿಸಲಾರದ ಪ್ರಶ್ನೆಯಾಗಿಯೇ ಕಾಡಿತ್ತು. ಈ ಸಂಶಯವನ್ನು ಶೂನ್ಯಪೀಠಾಧೀಶರಾದ ಪೂಜ್ಯ ಅಲ್ಲಮಪ್ರಭುದೇವರ ಈ ವಚನ ಪುಷ್ಠೀಕರಿಸುತ್ತದೆ.

*ನೆನೆದಿಹೆನೆಂದಡೆ ಮನಕ್ಕೆ ನಿಲುಕದು*
*ಅರಿದಿಹೆನೆಂದಡೆ ಕುರುಹಿಂಗೆ ಬಾರದು*
*ಕಂಡೆಹೆನೆಂದಡೆ ಮೂರ್ತಿಯಲ್ಲ !*

ತನುವಿನೊಳಗಿಲ್ಲದ ಮನದೊಳಗಿಲ್ಲದ ಘನವು
ನಿನ್ನ ಮನಕ್ಕೆ ವೇದ್ಯವಾದ ಪರಿ ಎಂತಯ್ಯಾ
ಗುಹೇಶ್ವರನೆಂಬ ಲಿಂಗವು
ಜಗದ ಕಣ್ಣಿಂಗೆ ಕತ್ತಲೆಯ ಕವಿಸಿ,
ತನ್ನ ತಪ್ಪಿಸಿಕೊಂಡಿಪ್ಪ ಭೇದ ನಿನ್ನೊಳಡಗಿದ
ಪರಿ ಎಂತು ಹೇಳಾ ಸಂಗನಬಸವಣ್ಣಾ !

ದೇಹ ಇಂದ್ರಿಯಮನಗಳಿಗೆ ಅತೀತವಾಗಿರುವ ಪರಮಾತ್ಮನ ಮಹಾಘನತತ್ತ್ವವು ಜಗದ ಕಣ್ಣಿಂಗೆ ಕತ್ತಲೆ ಯಾವರಿಸಿ ಅವ್ಯಕ್ತವಾಗಿದೆ. ಅಂತಹ ಪರಿಪೂರ್ಣತ್ವ ಮಹಾ ಘನತತ್ತ್ವವು ಗುರುಬಸವಣ್ಣನವರಲ್ಲಿ ವೇದ್ಯವಾಗಿರುವ ಪರಿಕಂಡ ಅಲ್ಲಮಪ್ರಭುಗಳು ವಿಸ್ಮಯ ಮತ್ತು ಅಚ್ಚರಿ ವ್ಯಕ್ತ ಪಡಿಸುವ ಮೂಲಕ ಗುರುಬಸವಣ್ಣನವರು ಪರಮಾತ್ಮನ ಸಾಕಾರರೂಪವೆಂದು ಪ್ರಮಾಣೀಕರಿಸುತ್ತಾರೆ. ಬಸವಣ್ಣನವರು ನೋಡಲು ದೇಹಾದಿರೂಪದಲ್ಲಿ ಕಂಡರೂ ಅವರಲ್ಲಿ ದೇಹಾ ದಿಗುಣಗಳ ಯಾವುದೇ ಸೋಂಕಿಲ್ಲದೆ ನಿರ್ವಿಕಲ್ಪ-ನಿರ್ಭಾವ ಮತ್ತು ಲಿಂಗೈಕ್ಯ ಪೂರ್ಣತ್ವ ಸಿದ್ಧಿ ಅವರಲ್ಲಿ ವಿರಾಜಿಸಿದೆ ಎಂದು ಪ್ರಭುದೇವರು ತಿಳಿಸುವುದರ ಮೂಲಕ ಬಸವಣ್ಣ ನವರಲ್ಲಿ ಪರಮಾತ್ಮನ ಚಿದ್‌ಬೆಳಕನ್ನು ಕಂಡುಕೊಂಡಿದ್ದರು.

ಶರಣಪರಂಪರೆ ಗುರುಬಸವಣ್ಣನವರನ್ನು 'ಪರಮಾತ್ಮನ ವಿಶೇಷ ಮಣಿಹ ಹೊತ್ತು ಜಗತ್ತಿಗೆ ಅವತರಿಸಿದ ದೇವಕಂದ' ಎಂದು ಸ್ತುತಿಸಿದೆ. ತೆಲುಗಿನ ಪಾಲ್ಕುರಿಕೆ ಸೋಮಾರಾಧ್ಯರ ಭಾಮಿನಿಷಟ್ಪದಿಯಲ್ಲಿರುವ 'ಬಸವಪುರಾಣ'ವನ್ನು ಕನ್ನಡಿಸಿರುವ ಭೀಮಕವಿ ಬಸವಣ್ಣನವರನು ಕುರಿತು 'ನಿರಾಕಾರನಾದ ಪರಮಾತ್ಮನು ಗುರುಬಸವಣ್ಣನವರೆಂಬ ಸಾಕಾರರೂಪದಲ್ಲಿ ಸಂಚರಿಸುತಿಹರು' ಎಂದು ಭಕ್ತಿ ಪರ ವಶತೆಯಿಂದ ಜಪಿಸಿದ್ದಾರೆ.

ಮಲ್ಲಿಗೆ ಇದ್ದಾಗ ಮುಳ್ಳೇಕೆ ಮುಡಿಯೂತಿ
ಕಲ್ಯಾಣದಲ್ಲಿ ಬಸವಯ್ಯ ಇದ್ದಾಗ
ಕಲ್ಲೇಕಯ್ಯಾ ಕೈಯ ಮುಗಿಯುವೆ !

ಎಂದಿರುವ ಜಾನಪದ ಕವಿವರ್ಯರು 'ದೇವಸ್ವರೂಪ ರಾದಂತಹ ಬಸವಣ್ಣನವರು ಈ ಮರ್ತ್ಯಲೋಕವನ್ನು ಪಾವನ ಗೊಳಿಸಿದರು' ಎಂದು ಹಾಡಿ ಧ್ಯಾನಿಸಿದ್ದಾರೆ. ಪರಮಾತ್ಮ ತತ್ತ್ವದ ಸಾಕಾರರೂಪವೇ ತಾವಾಗಿರುವ ಗುರುಬಸವಣ್ಣನವರ ತತ್ತ್ವಚಿಂತನ ಮತ್ತು ಧರ್ಮಸೂತ್ರಗಳು ಮಾನವ ಬದುಕಿಗೆ ಸಂಜೀವಿನಿಯಿದ್ದಂತೆ. ಅದು ವಿಶ್ವಜನತೆಗೆ ಸನ್ಮಾರ್ಗ ತೋರುವ ದಿಕ್ಸೂಚಿ.

ಈ ಇಳೆಯ ಸಾರ್ಥಕಪೂರ್ಣ ಬಾಳ್ವೆಯನ್ನು ಪೂರೈಸಿ ಪರಮಾತ್ಮನ ಪರಮಾನಂದದ ಬಯಲಿನೊಳಗೆ ಬಯಲಾದ ಶ್ರಾವಣಶುದ್ಧ ಪಂಚಮಿ ದಿನವನ್ನು 'ಬಸವಪಂಚಮಿ' ಎಂದು ನೂರಾರು ವರ್ಷಗಳಿಂದ ಜನತೆ ಆಚರಿಸಿಕೊಂಡು ಬರುತ್ತಿದೆ. ಬಸವಪಂಚಮಿಯ ಆಚರಣೆಯ ಈ ಸಂದರ್ಭದಲ್ಲಿ ಅವರು ಉಪದೇಶಿಸಿದ ದರ್ಶನಶಾಸ್ತ್ರವನ್ನು ನಾವಿಂದು ಅರಿಯ ಬೇಕಿದೆ. ನಮ್ಮ ಬದುಕಿನೊಳಗೆ ಪರಮಸತ್ಯವನ್ನು ಕಂಡು ಕೊಳ್ಳುವುದರ ಮೂಲಕ ಜೀವನವನ್ನು ಸಾರ್ಥಕಪಡಿಸಿ ಕೊಳ್ಳುವ ಪ್ರಾಮಾಣಿಕ ಪ್ರಯತ್ನ ಮಾಡಬೇಕಿದೆ.

*

### ಶ್ರೀವಾಣಿ

ಬಸವಣ್ಣನವರ ಪ್ರಪಂಚ ವಿಶ್ವಪ್ರಪಂಚ, ಮರ್ತ್ಯಲೋಕ ಮಾಯೆಯಲ್ಲ; ಕರ್ತಾರನ ಕಮ್ಮಟ. ಜಗತ್ತು ಮಹಾಶಕ್ತಿ ಯಿಂದ ವ್ಯಾಪಕವಾಗಿದೆ. ಜೀವನ ಸೌಕರ್ಯಗಳು ಬೇಕು. ಬಸವಣ್ಣನವರು ಮಾಡಿದ ಬಹುದೊಡ್ಡ ಸಾಮಾಜಿಕ ಪರಿವರ್ತನೆಯೆಂದರೆ ದುಡಿದು ಉಣ್ಣುವ ಸಂಸ್ಕೃತಿಯನ್ನು ನಿರ್ಮಾಣ ಮಾಡಿದ್ದು. ಬಸವತತ್ತ್ವಗಳು ಜಗತ್ತಿನ ಸಮಸ್ಯೆಗಳಿಗೆ ಪರಿಹಾರ ಕೊಡಬಲ್ಲವು. ಅವುಗಳನ್ನು ನಾವು ಆಚರಣೆಗೆ ತರಬೇಕು. ಅದರಿಂದ ನೆಮ್ಮದಿ.

* * *

ಬಸವಣ್ಣನವರು ಮಹಾ ಆಧ್ಯಾತ್ಮ ಚಿಂತಕ. ವಿಭೂತಿ ಪುರುಷ. ಇಂಥ ಮಹಾನ್ ಪುರುಷರನ್ನು ಅರ್ಥಮಾಡಿಕೊಳ್ಳುವ ಕೆಲಸ ಶ್ರದ್ಧೆಯಿಂದ ನಡೆಯ ಬೇಕು. ಅವರ ತತ್ತ್ವಗಳ ಪ್ರಸಾರವಾಗಬೇಕು. ಅವರು ಪ್ರತಿಪಾದಿಸಿದ ಕಾಯಕತತ್ತ್ವದ ಮಹೋನ್ನತ ಅಂಶಗಳನ್ನು ಪ್ರತಿಯೊಬ್ಬ ಮನುಷ್ಯನೂ ತಾನು ಮಾಡುವ ಕೆಲಸದಲ್ಲಿ ಕಾಣುವ ಶ್ರದ್ಧೆ, ನಿಷ್ಠೆಗಳನ್ನು ಬೆಳೆಸಿಕೊಳ್ಳಬೇಕು. ಪ್ರತಿಯೊಬ್ಬರೂ ಶ್ರಮಜೀವಿಗಳಾಗಬೇಕು. ಯಾವುದೇ ಕಾಯಕ ತುಚ್ಛವಲ್ಲ ಎಂದು ಹೇಳಿದ ಬಸವಣ್ಣನವರು ದುಡಿಮೆಯ ಹಿರಿಮೆಯನ್ನು ಎತ್ತಿಹಿಡಿದ ಶ್ರೇಯೋವಂತರು.





## ಕಾಯಕಯೋಗಿ ಶ್ರೀ ಇಮ್ಮಡಿ ಮಹಾಲಿಂಗಸ್ವಾಮಿಗಳು

-ಪಾಲನೇತ್ರ

ಹಲವು ಮಾತೇನು, ನೀನೊಲಿದು ಪಾದವನಿಟ್ಟ ನೆಲವೇ ಸುಕ್ಷೇತ್ರ, ಜಲವೇ ಪಾವನತೀರ್ಥ, ಶ್ರೀ ಗುರುವೇ ಕೃಪೆ ಯಾಗು! ಎಂಬಂತೆ ಬಸವಾದಿ ಶಿವಶರಣರ ಮತ್ತು ಪ್ರಭು ದೇವರ ಶೂನ್ಯ ಪರಂಪರೆಯಲ್ಲಿ ಬಂದ ಅನೇಕ ಜಂಗಮ ಮೂರ್ತಿಗಳು ನಾಡಿನ ಎಲ್ಲೆಡೆ ಸಂಚರಿಸಿ ತಮ್ಮ ಪಾದಸ್ಪರ್ಶದ ಜೊತೆಗೆ ಶಿವಯೋಗ ಫಲದಿಂದ ಮತ್ತು ದಿವ್ಯತೇಜಸ್ಸುಗಳಿಂದ ಸಂಸ್ಥಾಪಿಸಲ್ಪಟ್ಟ ಅನೇಕ ಮಠಗಳು ಇಂದಿಗೂ ಧಾರ್ಮಿಕ, ಸಾಂಸ್ಕೃತಿಕ ಮತ್ತು ಸಾಮಾಜಿಕ ಕ್ಷೇತ್ರಗಳಲ್ಲಿ ಗಣನೀಯ ಸೇವೆ ಸಲ್ಲಿಸುತ್ತಿದ್ದು, ಅಂತಹ ಭವ್ಯ ಪರಂಪರೆ ಯಲ್ಲಿ ಆದಿಗುರು ಶ್ರೀ ನಿರ್ವಾಣಸ್ವಾಮಿ ಗಳಿಂದ ಸಂಸ್ಥಾಪಿಸಲ್ಪಟ್ಟ ಮಠ ಇಂದಿಗೂ ಕನಕಪುರ (ಅಂದಿನ ಕಾಣಿ ಕಾರನಹಳ್ಳಿ ಮಠ) ದೇಗುಲಮಠ ಪ್ರಖ್ಯಾತವಾಗಿ ವೀರಶೈವ ಧರ್ಮದ ಮತ್ತು ಶಿವತತ್ತ್ವ ಬೆಳಗುವ ಜ್ಞಾನದ ತಪೋಭೂಮಿಯಾಗಿದೆ.

ಅರ್ಕಾವತಿ ದಡದಲ್ಲಿ ಕಂಗೊಳಿ ಸುತ್ತಿರುವ ದೇಗುಲ ಮಠವು ಶಿವ ಯೋಗದ ತಪೋಭೂಮಿ, ನಿಸರ್ಗ ರಮಣೀಯ ಸುಂದರ ಚಿತ್ತಾಕರ್ಷಕವಾಗಿ ಆಕರ್ಷಿಸುವ ತೆಂಗು-ಮಾವು, ಅಡಿಕೆ, ಮುಂತಾದ ತೋಟದ ವನರಾಶಿ ಗಳ ಮಧ್ಯೆ ವೀರಶೈವ ಧರ್ಮದ ಸಮನ್ವಯದ ಕೇಂದ್ರವಾಗಿ 'ಶರಣರ ಬರವೆಮಗೆ ಪ್ರಾಣವೇ ಜೀವಾಳವಯ್ಯ, ದಯವೇ ಧರ್ಮದ ಮೂಲವಯ್ಯ' ಎಂಬ ಬಸವಣ್ಣನವರ ಸಂದೇಶ ದಂತೆ ಹಸಿದ ಹೊಟ್ಟೆಗೆ ಅನ್ನ, ಮಸ್ತಕಕ್ಕೆ ಜ್ಞಾನ ನೀಡಿರುವ ಕರ್ಮಭೂಮಿಯಾಗಿದೆ. ನಿತ್ಯ ಬದುಕಿನಲ್ಲಿ ಬಸವಳಿದ ಜೀವಿ ಗಳಿಗೆ ಅವರ ದುಃಖ ದುಮ್ಮಾನಗಳಲ್ಲಿ ಬೆರೆತು ಅವರ ಬಾಳಿಗೆ ಬೆಳಕು ಮೂಡಿಸುವಲ್ಲಿ ಅನೇಕ ಪೂಜ್ಯರು ಶ್ರಮಿಸಿದರ ಫಲವಾಗಿ ಇಂದು ಕನ್ನಡ ನಾಡಿನಲ್ಲಷ್ಟೇ ಅಲ್ಲದೆ ಹೊರ ರಾಜ್ಯಗಳಲ್ಲೂ ದೇಗುಲಮಠವು ಭಕ್ತ ಜನತೆಯನ್ನು ಅಪಾರ ಸಂಖ್ಯೆಯಲ್ಲಿ ಆಕರ್ಷಿಸಿದೆ. ಶ್ರೀಮಠವು ಬಸವಾದಿ ಶಿವ ಶರಣರ ತತ್ತ್ವಗಳನ್ನು ಆಚರಣೆಗೆ ತರುವ ಪ್ರಯೋಗಶಾಲೆ ಯಾಗಿದೆ. ನಾಡಿನ ಅನೇಕ ಪೂಜ್ಯರು ಗುರು-ವಿರಕ್ತ ಎಂಬ ಭಾವನೆಯಿಲ್ಲದೆ ಎಲ್ಲಾ ಪೂಜ್ಯರ ಮತ್ತು ಭಕ್ತರ ಮನೆ ಮನಗಳಲ್ಲಿ ದೇಗುಲ ಮಠವು ತನ್ನ ವೈಶಿಷ್ಟ್ಯ, ಪರಂಪರೆ ಯನ್ನು ಬಿತ್ತರಿಸಿರುವುದರಿಂದ 20ನೇ ಶತಮಾನದಲ್ಲಿ ಈ ಮಠವು ಸಾಧಿಸಿದ ಮಹಾಕಾರ್ಯಗಳು ನಿಜಕ್ಕೂ ಒಂದು ಪವಾಡವೆಂದರೂ ಸರಿ.

ಶ್ರೀ ದೇಗುಲಮಠದ ಗುರು ಪರಂಪರೆಯಲ್ಲಿ ಅನೇಕ ಪೂಜ್ಯರು ತಮ್ಮ ಶಿವತತ್ತ್ವದ ಬೆಳಕಿನಲ್ಲಿ ಬೆಳಗಿ ಜನಸಮುದಾಯದ ಇಷ್ಟಾರ್ಥ ಗಳನ್ನು ಈಡೇರಿಸಿ, ಅವರ ಹೃದಯ ದಲ್ಲಿ ನೆಲಸಿ ಎನಗಿಂತ ಕಿರಿಯರಿಲ್ಲ, ಶಿವಭಕ್ತರಿಗಿಂತ ಹಿರಿಯರಿಲ್ಲ ಎಂಬಂತೆ ಎಲ್ಲಾ ಸಂದರ್ಭದಲ್ಲೂ ಶಿವಭಕ್ತ ಸಮೂಹದ ನಡುವೆ ಬದುಕಿದವರು. ಅವರೊಡನೆ ಬೆರೆತು, ನರನನ್ನು ಹರನನ್ನಾಗಿ ಮಾಡಿದ ಅನೇಕ ಪೂಜ್ಯರು 'ನಡೆದಾಡುವ ದೇವರೆಂದು' ಭಕ್ತ ಸಮುದಾಯ ತಿಳಿದು ಇಂದಿಗೂ ಸಹ ಶ್ರೀ ದೇಗುಲಮಠದ ಗುರು ಪರಂಪರೆಗೆ ಭಕ್ತಿ ಗೌರವಗಳನ್ನಿಟ್ಟು ನಡೆಯುತ್ತಿರುವುದೇ ಸಾಕ್ಷಿಯಾಗಿದೆ.

ಆದಿಗುರು ಶ್ರೀ ನಿರ್ವಾಣಸ್ವಾಮಿಗಳಿಂದ ಸಂಸ್ಥಾಪನೆ ಗೊಂಡ ಈ ಪ್ರಾಚೀನ ಮಠದಲ್ಲಿ ಶ್ರೀ ನಂಜಯ್ಯಸ್ವಾಮಿ ಗಳು, ಶ್ರೀ ಮಹಾಲಿಂಗಸ್ವಾಮಿಗಳು, ಶ್ರೀ ಹುಚ್ಚಪ್ಪಸ್ವಾಮಿ ಗಳು, ಶ್ರೀ ಮರುಳಸಿದ್ಧದೇವರು, ಶ್ರೀ ಚನ್ನಬಸವಸ್ವಾಮಿ ಗಳು, ಶ್ರೀ ಇಮ್ಮಡಿ ಮರುಳಸಿದ್ಧರು, ಶ್ರೀ ಇಮ್ಮಡಿ ಹುಚ್ಚಪ್ಪ ಸ್ವಾಮಿಗಳು, ಶ್ರೀ ಮಹಾಲಿಂಗಸ್ವಾಮಿಗಳು, ಶ್ರೀ ಇಮ್ಮಡಿ ನಿರ್ವಾಣಸ್ವಾಮಿಗಳು, ಶ್ರೀ ಇಮ್ಮಡಿ ಮಹಾಲಿಂಗಸ್ವಾಮಿ ಗಳು

ಶಿವತತ್ತ್ವಗಳನ್ನು ಜನಮನದಲ್ಲಿ ಪ್ರಸಾರ ಮಾಡಿ ಅಮರರಾಗಿದ್ದು, ಪ್ರಸ್ತುತ ಮಠಾಧ್ಯಕ್ಷರಾಗಿರುವ ಶ್ರೀ ಮುಮ್ಮಡಿ ನಿರ್ವಾಣಮಹಾಸ್ವಾಮಿಗಳು ಈ ಮಠದ ಪರಂಪರೆಯಲ್ಲಿ ಬಂದಿರುವ ಗಮನಾರ್ಹ ಗುರುವರ್ಯರಾಗಿದ್ದಾರೆ.

ಶಿವಯೋಗ ಸಂಪನ್ನರು, ಧರ್ಮನಿಷ್ಠರು, ವೈರಾಗ್ಯ ಚಕ್ರವರ್ತಿಗಳಾದ ಶ್ರೀ ಇಮ್ಮಡಿ ನಿರ್ವಾಣಸ್ವಾಮಿಗಳು ತಮ್ಮ ದಿವ್ಯ ವ್ಯಕ್ತಿತ್ವದಿಂದ ಜನಮನಕ್ಕೆ ಹತ್ತಿರವಾದರು. ಬಡವ-ಬಲ್ಲಿದ ಜಾತಿ-ಭೇದಗಳು ಅವರಲ್ಲಿ ಕಿಂಚಿತ್ತು ಸುಳಿಯಲಿಲ್ಲ. 'ಇವನಾರವ, ಇವನಾರವ, ಇವನಾರವನೆಂದೆನಿಸದಿರಯ್ಯ ಇವನಮ್ಮವ ಇವನಮ್ಮವ ಎಂದೆನಿಸಯ್ಯ' ಎಂಬಂತೆ ಭಕ್ತ ಸಮುದಾಯವನ್ನು ಯಾವುದೇ ಜಾತಿ-ಮತ ಭೇದಗಳನ್ನು ಮಾಡದೆ ಸರ್ವರನ್ನು ಅಪ್ಪಿಕೊಂಡರು. ಮಾತೃವಾತ್ಸಲ್ಯ ಸ್ವರೂಪಿಗಳಾಗಿದ್ದ ಶ್ರೀ ಇಮ್ಮಡಿ ನಿರ್ವಾಣಸ್ವಾಮಿಗಳು ಸಕಲ ಪ್ರಾಣಿಗಳಲ್ಲಿ ದಯವಿರಬೇಕೆನ್ನುವ ಕಾರುಣ್ಯಮೂರ್ತಿ, ಮಠದಲ್ಲಿನ ಬಿಸಿಲಿನಲ್ಲಿ ಬಸವಳಿದ ಎಲ್ಲಾ ಮೂಕ ಪ್ರಾಣಿಗಳ ಮೈದಡವಿ ಅವುಗಳಿಗೆ ಮೇವು ಹಾಕಿ ಸಲಹುತ್ತಿದ್ದ ಅವರ ಅವಿನಾಭಾವ ಸಂಬಂಧಗಳು ಅಚ್ಚರಿಯುಂಟು ಮಾಡುತ್ತಿತ್ತು.

ಶಿವಸಂಪತ್ತಿನ ಬೆಳಕಿನಲ್ಲಿ ಬೆಳಗುತ್ತಿರುವ ಶ್ರೀದೇಗುಲ ಮಠಕ್ಕೆ ಸಮರ್ಥ ಉತ್ತರಾಧಿಕಾರಿ ನೇಮಿಸಬೇಕೆಂದು ನಿರ್ಧರಿಸಿದ ಪೂಜ್ಯ ಶ್ರೀ ಇಮ್ಮಡಿ ನಿರ್ವಾಣಸ್ವಾಮಿಗಳು ತಮ್ಮ ಮಠದ ಭಕ್ತರೊಂದಿಗೆ ಚರ್ಚಿಸಿ ನಂತರ ಸಮರ್ಥ ವ್ಯಕ್ತಿಯೊಬ್ಬರನ್ನು ನೀಡುವಂತೆ ಸಿದ್ಧಗಂಗೆಯ ಜ್ಯೋತಿ, ಶಿವಯೋಗ ನಿಷ್ಠರಾದ ಪೂಜ್ಯ ಉದ್ದಾನಶಿವಯೋಗಿಗಳಲ್ಲಿ ಭಿನ್ನವಿಸಿಕೊಂಡಾಗ ತಮ್ಮ ಶಿಷ್ಯರೊಬ್ಬರಾದ ಶ್ರೀ ಕಾಳಪ್ಪ ಅವರನ್ನು ದೇಗುಲಮಠಕ್ಕೆ ಉತ್ತರಾಧಿಕಾರಿಯಾಗಿ ಕಾರ್ಯ ನಿರ್ವಹಿಸಲು ಉದ್ದಾನ ಶಿವಯೋಗಿಗಳು ಅಪ್ಪಣೆ ಮಾಡಿ ಪೂಜ್ಯ ಶ್ರೀ ನಿರ್ವಾಣಸ್ವಾಮಿಗಳ ಬಯಕೆಯನ್ನು ಈಡೇರಿಸಿದರು.

ಪೂಜ್ಯ ಶ್ರೀ ಉದ್ದಾನಶಿವಯೋಗಿಗಳ ಕೃಪಾಕಟಾಕ್ಷದಲ್ಲಿ ಬೆಳೆದು ಕಾರುಣ್ಯ ಮೂರ್ತಿಗಳಾದ ಪ್ರಸಕ್ತ ಸಿದ್ಧಗಂಗೆಯ ಸಿದ್ಧಪುರುಷ ಪರಮಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು, ದೇಗುಲಮಠದ ಶ್ರೀ ಮಹಾಲಿಂಗಸ್ವಾಮಿಗಳು, ಕಂಚುಗಲ್ಲು ಬಂಡೇಮಠದ ಶ್ರೀ ಶಿವರುದ್ರಸ್ವಾಮಿಗಳು ಮತ್ತು ಅಂಕನಹಳ್ಳಿ ಗವಿಮಠದ ಶ್ರೀ ಸಿದ್ಧಲಿಂಗ ಶಿವಾಚಾರ್ಯ ಸ್ವಾಮಿಗಳು ಇವರ್ಯಾರೂ ಒಬ್ಬರನ್ನು ಬಿಟ್ಟು ಇರದವರು, ಸದಾ ತಮ್ಮ ತಮ್ಮ ಕಾರ್ಯಕ್ಷೇತ್ರಗಳಲ್ಲಿ ಸಾಧನೆ ಮಾಡಿದವರು. ಸತತ ಸಾಧನೆಗಳಿಂದ ತಮ್ಮ ಮಠಗಳನ್ನು ಅವಿಮುಕ್ತ ಕ್ಷೇತ್ರಗಳನ್ನಾಗಿ ಮಾಡಿದ ಕೀರ್ತಿ ಇವರದು. ಬಯಸಿ ಬಂದದ್ದು ಅಂಗಭೋಗ, ಬಯಸದೇ ಬಂದದ್ದು ಲಿಂಗ ಭೋಗ ಎಂಬಂತೆ ತಮ್ಮ ಪಾಲಿಗೆ ಬಂದ ಕರ್ತವ್ಯಗಳನ್ನು ಮಾಡುವಲ್ಲಿ ಸಿದ್ಧಪುರುಷರಾದರು. ಶಿವಯೋಗದ ಸಂಪನ್ನರಾದರು. ಸೂರ್ಯಚಂದ್ರರಂತೆ ಬೆಳಕಿನ ಬೆಳದಿಂಗಳಾಗಿ ಆಕಾಶದಲ್ಲಿ ಧ್ರುವನಕ್ಷತ್ರದಂತೆ ಜನರ ಹೃದಯದಲ್ಲಿ ರಾರಾಜಿಸುವ ಜ್ಯೋತಿ ಸ್ವರೂಪರಾಗಿದ್ದಾರೆ.

ಶ್ರೀ ಉದ್ದಾನ ಶ್ರೀ ಶಿವಯೋಗಿವರ್ಯರ ಅಪಾರ ಕರುಣೆಯ ಆಶೀರ್ವಾದ ಪಡೆದಿದ್ದ ಶ್ರೀ ಕಾಳಪ್ಪನವರು ಪೂಜ್ಯ ಶ್ರೀ ಇಮ್ಮಡಿ ನಿರ್ವಾಣಸ್ವಾಮಿಗಳ ಕರಕಮಲ ಸಂಜಾತರಾಗಿ ಶ್ರೀ ಇಮ್ಮಡಿ ಮಹಾಲಿಂಗಸ್ವಾಮಿಗಳು ಎಂಬ ನೂತನ ಅಭಿದಾನದಿಂದ 1939 ಫೆಬ್ರವರಿಯಲ್ಲಿ ಶ್ರೀ ದೇಗುಲಮಠದ ಚರಪಟ್ಟಾಧಿಕಾರಿಗಳಾಗಿ ಅಧಿಕಾರ ಸ್ವೀಕರಿಸಿದ ಅವರು ಅಕ್ಕಮಹಾದೇವಿಯ ವಚನದಂತೆ 'ನರಜನ್ಮವ ತೊಡೆದು ಹರಜನ್ಮವ ಮಾಡಿದ ಗುರುವೆ, ಭವಬಂಧನವ ಬಿಡಿಸಿ ಪರಮಸುಖದ ತೋರಿದ ಗುರುವೆ, ಭವಿ ಎಂಬುದ ತೊಡೆದು ಭಕ್ತನೆಂದೆನಿಸಿದ ಗುರುವೆ ಚನ್ನಮಲ್ಲಿಕಾರ್ಜುನನ ತಂದೆನ್ನ ಕೈವಶಕ್ಕೆ ಕೊಟ್ಟ ಶ್ರೀ ಗುರುವಿಗೆ ಶರಣು' ಎಂಬಂತೆ ಪೂಜ್ಯ ನಿರ್ವಾಣಸ್ವಾಮಿಗಳ ಕೃಪಾಶೀರ್ವಾದಕ್ಕೆ ಪಾತ್ರರಾದರು. ಶ್ರೀಮಠದ ಬೆಳವಣಿಗೆಯ ಬಗ್ಗೆ ಗಮನವನ್ನು ಹರಿಸಿ ಶಿವಶರಣರ ತತ್ತ್ವಚಿಂತನೆಗಳನ್ನು ಮತ್ತು ಈ ಮಠದ ಗುರು ಪರಂಪರೆಯ ಧರ್ಮದ ಯಜ್ಞವು ಜನರ ಬದುಕಿಗೆ ನಂದಾದೀಪದಂತೆ ಚಿರಕಾಲ ಬೆಳಗಬೇಕು. ಅರಿವಿನ ಬೆಳಕಿನಲ್ಲಿ ಮುಕ್ತಿಯನ್ನು ಪಡೆಯಬೇಕೆಂದು ಶ್ರೀಮಠದಲ್ಲಿ ಧಾರ್ಮಿಕ ಚಟುವಟಿಕೆಗಳ ಜೊತೆಗೆ ಶಿವಾನುಭವ ಗೋಷ್ಠಿಗಳು, ವಿವಿಧ ಧಾರ್ಮಿಕ ಸಮಾರಂಭಗಳನ್ನು ಆರಂಭಿಸಿದರು. ಅವರ ಸಂಕಲ್ಪದ ಫಲದಿಂದ ಶ್ರೀ ದೇಗುಲಮಠವು ಇಂದಿಗೂ ತನ್ನ ವೈಶಿಷ್ಟ್ಯತೆಯನ್ನು ಉಳಿಸಿಕೊಂಡಿದೆ. ಸರ್ವತೋಮುಖವಾದ ಅಭಿವೃದ್ಧಿ ಕಾರ್ಯಗಳನ್ನು ಕೈಗೊಂಡಿದೆ.





ಹಮ್ಮು-ಬಿಮ್ಮುಗಳಲ್ಲಿ, ಸೃಷ್ಟಿ ಸಮಸ್ತದಲ್ಲಿ ಬೆರೆತ ಅನಂತಾನಂತ ರೂಪ ರೂಪವನ್ನು ಪ್ರತಿವಸ್ತುವಿನಲ್ಲಿ ಕಂಡರಸಿದ ಮಹಾನುಭಾವಿಗಳು ಶ್ರೀ ಇಮ್ಮಡಿ ಮಹಾಲಿಂಗ ಸ್ವಾಮಿಗಳು, ಪರುಷ ತಾಗಿದ ಲೋಹದಂತೆ ಪಾವಕರು, ಪರಿಶುದ್ಧರು, ಇವರ ಸನ್ನಿಧಿಯಲ್ಲಿದ್ದವರು ಪರಮಪವಿತ್ರರು. ತಮ್ಮದೇ ಆದ ಅನುಭಾವದ ಮೂಲಕ ನಡೆ-ನುಡಿಯಲ್ಲಿ ಏಕತೆಯನ್ನು ಸಾಧಿಸಿ ಧಾರ್ಮಿಕ, ಶೈಕ್ಷಣಿಕ ಮತ್ತು ಸಾಂಸ್ಕೃತಿಕವಾಗಿ ತ್ರಿವೇಣಿ ಸಂಗಮದಂತೆ ತಮ್ಮ ಸಂಕಲ್ಪ ಶಕ್ತಿಯಿಂದ ಅದ್ಭುತವಾದ ಸಾಧನೆ ಮಾಡಿದರು. ದೇಗುಲ ಮಠವನ್ನು ಮಹಾ ಮನೆಯನ್ನಾಗಿಸಿ ತ್ರಿವಿಧ ದಾಸೋಹ ಕೇಂದ್ರವನ್ನಾಗಿ ಮಾರ್ಪಡಿಸಿದರು. ಹಸಿದು ಬಂದವರಿಗೆ ಶ್ರೀಮಠದಲ್ಲಿ ಪ್ರಸಾದ ನೀಡಿ ಹಸಿವನ್ನು ಇಂಗಿಸಿ, ಅವರ ಯೋಗಕ್ಷೇಮ ವನ್ನು ವಿಚಾರಿಸುತ್ತಿದ್ದ ಅವರು; ಕಂಡ ಭಕ್ತರಿಗೆ ಕೈಮುಗಿವಾತನೇ ಭಕ್ತ, ಶರಣರ ವಚನಂಗಳೇ ಜಪಂಗಳಯ್ಯ, ಸದುವಿನಯವೇ ಸದಾಶಿವನ ಒಲುಮೆಯಯ್ಯಾ ಎಂಬತೆ ಎಲ್ಲರೊಂದಿಗೆ ಬೆರೆತು, ಭಕ್ತರ ಬದುಕಿನ ದುಃಖದುಮ್ಮಾನಗಳಿಗೆ ಸಾಂತ್ವನ ಹೇಳಿ ಅವರಲ್ಲಿ ಪರಿವರ್ತನೆಯ ಹಾದಿಯನ್ನು ಹಿಡಿಯುವಂತೆ ಪ್ರಚೋದಿಸುವುದರ ಮೂಲಕ ಬಂದ ಜನತೆಯಲ್ಲಿ ಆತ್ಮಶಕ್ತಿಯನ್ನು ತುಂಬಿಸುತ್ತಿದ್ದರು.

ತಮ್ಮ ನಡೆ-ನುಡಿ ಗುಣಗಳಿಂದ ಘನ ವ್ಯಕ್ತಿತ್ವ ಪಡೆದ ಪೂಜ್ಯ ಶ್ರೀ ಇಮ್ಮಡಿ ಮಹಾಲಿಂಗಸ್ವಾಮಿಗಳು ಸದಾ ಹಸನ್ಮುಖಿಗಳು. ಸದೃಢಕಾಯದ ಬಿಳಿಯ ಬಣ್ಣ, ಹಣೆಯಲ್ಲಿ ತ್ರಿಪುಂಡ ಭಸ್ಮ, ಕೈಯಲ್ಲಿ ಬೆತ್ತ, ಮೈತುಂಬ ಹೊದೆದ ಸ್ವಚ್ಛವಾದ ಕಾವಿಬಟ್ಟೆ, ಒಮ್ಮೆ ನೋಡಿದರೆ ಮತ್ತೊಮ್ಮೆ ನೋಡಬೇಕೆಂಬ ತವಕ. ಮಿಗಿಲಾಗಿ ಅಪರಿಚಿತರನ್ನೂ ಸಹ ತಮ್ಮ ಅಂತಃಕರಣದಿಂದ ಅವಲೋಕಿಸುವ ಮನಸ್ಸು, ಬಸವಾದಿ ಶಿವಶರಣರು ತೋರಿದ ದಾರಿಯಲ್ಲೇ ಮುಂದುವರೆದು 'ದಯವೇ ಧರ್ಮದ ಮೂಲ'ದ ನೆಲೆಯನ್ನು ತಮ್ಮ ಅನುಭವದಡಿಯಲ್ಲಿ ಕಂಡುಕೊಂಡಿದ್ದ ಅವರು ಜ್ಞಾನಯೋಗಿಗಳಾಗಿರುವಂತೆ ಕರ್ಮಯೋಗಿ ಗಳೂ ಹೌದು. 'ರಾಟಿ-ಮೇಟಿಗಳಲ್ಲದಿದ್ದರೆ ಲೋಕ ದಾಟವೇ ಕೆಡಗು' ಎಂಬಂತೆ 'ಕೋಟಿ ವಿದ್ಯೆಗಿಂತ ಮೇಟಿ ವಿದ್ಯೆಯೇ ಮೇಲು' ಎಂಬ ಕ್ರಾಂತಿಕವಿ ಸರ್ವಜ್ಞನ ಸಂದೇಶದಂತೆ ಮಠದಲ್ಲಿನ ಎಲ್ಲಾ ಹೊಲ-ಗದ್ದೆಗಳ ಕಡೆ ಹೆಚ್ಚು ಗಮನವನ್ನು ಹರಿಸುವುದರ ಜೊತೆಗೆ ಸ್ವತಃ ತಾವೇ ಕೃಷಿಯ ಉಸ್ತುವಾರಿಯನ್ನು ವಹಿಸಿ, ಸಂದರ್ಭದಕ್ಕೆ ತಕ್ಕ ಬೆಳೆ ಬೆಳೆಯುತ್ತಿದ್ದರಲ್ಲದೆ ಗ್ರಾಮೀಣ ಪ್ರದೇಶದಲ್ಲಿ ಪ್ರವಾಸ ಮಾಡಿದ ಸಂದರ್ಭದಲ್ಲಿ ರೈತರ ಬೆಳೆಯ ಬಗ್ಗೆ ಸಮಾಲೋಚಿಸಿ ಅವರುಗಳಿಗೆ ಸಮಯೋಚಿತವಾದ ಸಲಹೆ ಸೂಚನೆಗಳನ್ನು ನೀಡುತ್ತಿದ್ದ ಹಿರಿಮೆ ಶ್ರೀಗಳವರದು.

ಶ್ರೀಮಹಾಲಿಂಗಸ್ವಾಮಿಗಳು ಇದ್ದ ಕಡೆಯಲ್ಲಿ ಭಕ್ತ ಸಮುದಾಯದ ಜೊತೆಗೆ ಅನೇಕ ಮಠಾಧಿಪತಿಗಳು, ತ್ರಿವಿಧ ಕ್ಷೇತ್ರಗಳಲ್ಲಿ ಸೇವೆ ಸಲ್ಲಿಸುತ್ತಿದ್ದ ಸಮಾಜ ಬಂಧುಗಳು ಸೇರಿಕೊಳ್ಳುತ್ತಿದ್ದ ಸಂದರ್ಭಗಳಲ್ಲಿ ಅನೇಕ ವಿಷಯಗಳ ಬಗೆಗೆ ಚರ್ಚಿಸುತ್ತಿದುದ್ದನ್ನು ಗಮನಿಸಿದರೆ ಅದೊಂದು 'ಅನುಭವಮಂಟಪ'ದಂತೆ ಗೋಚರಿಸುವಂತಹುದು. ಅನೇಕ ವಿಷಯಗಳ ಚರ್ಚೆಯ ನಂತರ ಶ್ರೀ ಮಹಾಲಿಂಗಸ್ವಾಮಿಗಳು ತಮ್ಮದೇ ಆದ ಸ್ಪಷ್ಟ ಮತ್ತು ಸರಳವಾದ ಭಾಷೆಯಲ್ಲಿ ವಿಷಯಗಳನ್ನು ಪ್ರಸ್ತಾವನೆ ಮಾಡಿದಾಗ ಅವರ ಗಂಭೀರವಾದ ಭಾವನೆಗಳನ್ನು ಗಮನಿಸಿದರೆ ಅವರೊಬ್ಬರು ಲೋಕ ಕಲ್ಯಾಣದ ಜವಾಬ್ದಾರಿಯನ್ನು ಹೊತ್ತ ಸಿದ್ಧಪುರುಷರಾಗಿದ್ದರು. ಶ್ರೀ ಮಹಾಲಿಂಗಸ್ವಾಮಿಗಳು ಪವಾಡ ಪುರುಷರೇನಲ್ಲ. ಜನಮೆಚ್ಚುವ ಅಥವಾ ಮಠಕ್ಕೆ ಆಕರ್ಷಿಸಲು ಯಾವ ಚಮತ್ಕಾರಗಳಿಗೆ ಕೈಹಾಕಲಿಲ್ಲ. ಅವರ ನಡೆ-ನುಡಿಗಳು ಮಂತ್ರವಾಗಿ, ಅವರು ಕೈಗೊಂಡ ಕಾರ್ಯಗಳು ಘನಸ್ವರೂಪಗಳಾಗಿದ್ದವು. ಸ್ವತಃ ಸಂಸಾರದಿಂದ ದೂರವಾದರೂ ಲೋಕಸಂಸಾರದ ಜವಾಬ್ದಾರಿಯನ್ನು ಹೊತ್ತವರಾಗಿ ದುಡಿದು, ಸ್ವಾವಲಂಬನೆಯ ಸಂಕೇತವಾಗಿ ಕಾಯಕ ತತ್ವವನ್ನು ತಮ್ಮ ನಿತ್ಯ ಜೀವನದಲ್ಲಿ ಆಚರಣೆಗೆ ತಂದು ಇತರರಿಗೆ ಮಾರ್ಗದರ್ಶಕರಾದರು.

ಶ್ರೀ ದೇಗುಲಮಠಕ್ಕೆ ವಿಪುಲ ಆದಾಯ ಬರುವಂತಹ ಆಸ್ತಿಗಳಾವುವು ಇಲ್ಲ. ಕೇವಲ ಭಕ್ತರ ಸಹಾಯದಿಂದ ದಾನಿ ಗಳಿಂದ ಎಲ್ಲವೂ ನಡೆಯುತ್ತಿದೆ. ಇಂದಿಗೂ ಸಹ ಈ ಮಠಕ್ಕೆ ಭಕ್ತ ಸಮುದಾಯ ತಮ್ಮ ಹೃದಯ ಸಂಪನ್ನತೆಯಿಂದ ಉದಾರ ಹಸ್ತವನ್ನು ಚಾಚುತ್ತಲೇ ಬಂದಿದೆ. ಮಠದ ಬೆಳವಣಿಗೆಗೆ ಶ್ರೀ ಮಹಾಲಿಂಗಸ್ವಾಮಿಗಳವರ ಜೋಳಿಗೆಯೇ ದೊಡ್ಡ ಸಂಪತ್ತು. ಅದನ್ನು ಅಕ್ಷಯ ಪಾತ್ರೆಯನ್ನಾಗಿಸಿ ಶ್ರೀಮಠ ದಲ್ಲಿ ಚಟುವಟಿಕೆಗಳನ್ನು

ನಿರಂತರವಾಗಿ ನಡೆಸಿದ್ದಲ್ಲದೆ ಸಾಮಾಜಿಕ, ಧಾರ್ಮಿಕ ಚಟುವಟಿಕೆಗಳನ್ನು ಎಡಬಿಡದೆ ನಡೆಸಿ, ನಾಡಿನ ವಿವಿಧ ಕ್ಷೇತ್ರಗಳ ಗಣ್ಯರುಗಳನ್ನು ಗುರುತಿಸಿ ಅವರುಗಳ ಸೇವಾ ಕಾರ್ಯಗಳನ್ನು ಪ್ರಶಂಸಿಸಿ, ಆಶೀರ್ವದಿಸುವ ವಿಶಾಲ ಭಾವನೆ ಅವರಲ್ಲಿತ್ತು. ಎಲ್ಲಾ ಧಾರ್ಮಿಕ-ವಿಧಾನಗಳ ಬಗ್ಗೆ ಮತ್ತು ಎಲ್ಲಾ ಧರ್ಮೀಯ ರುಗಳ ಬಗ್ಗೆ ಗೌರವ ಭಾವನೆ ಉಳ್ಳವರಾಗಿದ್ದ ಶ್ರೀಗಳು ನುಡಿದರೆ ಮುತ್ತಿನಹಾರದಂತೆ, ಬಸವಾದಿ ಶಿವಶರಣರ, ದಾರ್ಶನಿಕರ ಬಗ್ಗೆ ಸಭೆ ಸಮಾರಂಭಗಳಲ್ಲಿ ತಮ್ಮದೇ ಆದ ವಿಶಿಷ್ಟ ರೀತಿಯಲ್ಲಿ ಹೇಳುವ ಮೂಲಕ ಶರಣ ಸಾಹಿತ್ಯ ಮತ್ತು ವೀರಶೈವ ಸಂಸ್ಕೃತಿಯನ್ನು ಮನೆ-ಮನಕ್ಕೆ ತಲುಪುವಂತೆ ಮಾಡಿದ ಕಾರ್ಯ ಅದ್ಭುತವಾದುದು.

ಹಿರಿಯ ಶ್ರೀಗಳಾದ ಇಮ್ಮಡಿ ನಿರ್ವಾಣಸ್ವಾಮಿಗಳ ಬಗ್ಗೆ ಅಪಾರ ಗೌರವ ಉಳ್ಳವರಾಗಿದ್ದರು. ಅವರ ಸೇವಾ ಕೈಂಕರ್ಯಗಳಿಗೆ ಕೈಗೂಡಿಸಿದರು. ಅವರುಗಳು ಸೂರ್ಯ ಚಂದ್ರರಂತೆ ಪರಿಮಳ-ಪುಷ್ಪದಂತೆ, ಗುರು-ಶಿಷ್ಯರುಗಳ ಸಂಬಂಧಗಳು ವರ್ಣಿಸಲು ಅಸಾಧ್ಯವಾದುದು. ಹಿರಿಯ ಶ್ರೀಗಳು ಸಹ ಶ್ರೀಮಠದ ಎಲ್ಲಾ ಜವಾಬ್ದಾರಿಗಳನ್ನು ಶ್ರೀ ಮಹಾಲಿಂಗಸ್ವಾಮಿಗಳೇ ನಿರ್ವಹಿಸಲು ಅನುವು ಮಾಡಿ ಕೊಡುತ್ತಿದ್ದುದರ ಫಲವಾಗಿ ಶಿಕ್ಷಣ ಪ್ರೇಮಿಗಳಾಗಿದ್ದ ಪೂಜ್ಯ ಶ್ರೀ ಮಹಾಲಿಂಗಸ್ವಾಮಿಗಳು, ಪೂಜ್ಯ ಶ್ರೀ ನಿರ್ವಾಣಸ್ವಾಮಿಗಳ ಶಿವಪೂಜಾಶಕ್ತಿ, ತಮ್ಮ ಸಂಕಲ್ಪಶಕ್ತಿ ಮತ್ತು ಶ್ರೀಮಠದ ಭಕ್ತರ ಭಕ್ತಿಗಳನ್ನು ಸಮೀಕರಿಸಿ ಶ್ರೀ ದೇಗುಲಮಠದಲ್ಲಿ ಶ್ರೀ ನಿರ್ವಾಣಸ್ವಾಮಿ ಕೃಪಾ ವಿದ್ಯಾಪೀಠವನ್ನು ಆರಂಭಿಸಿ, ಜಾತಿ-ಮತಗಳ ಭೇದವಿಲ್ಲದೆ ಗ್ರಾಮೀಣ ಬಡ ವಿದ್ಯಾರ್ಥಿಗಳಿಗೆ ವಿದ್ಯಾರ್ಜನೆ ಮಾಡಲು ಅವಕಾಶ ಕಲ್ಪಿಸಿ, ಅವರುಗಳಿಗೆ ಉಚಿತ, ವಸತಿ, ನಿಲಯಗಳನ್ನು ಆರಂಭಿಸಿದರು. ಪ್ರಾಥಮಿಕ ಹಂತದಿಂದ ಹಿಡಿದು ಪ್ರೌಢಶಾಲೆಗಳು, ಪದವಿ ಪೂರ್ವ ಕಾಲೇಜು, ಅನಾಥಾಶ್ರಮ, ಸಂಸ್ಕೃತ, ವೇದ ಆಗಮ ಪಾಠಶಾಲೆಗಳು ಮತ್ತು ಗ್ರಾಮೀಣ ಪ್ರದೇಶಗಳಲ್ಲಿ ಅನೇಕ ಪ್ರೌಢಶಾಲೆಗಳನ್ನು ಆರಂಭಿಸಿ ಗ್ರಾಮೀಣ ಮಕ್ಕಳು ವಿದ್ಯಾವಂತರಾಗಲು ಅನುಕೂಲ ಮಾಡಿಕೊಟ್ಟ ಫಲವಾಗಿ ವಿದ್ಯಾರ್ಥಿಗಳು ಇಂದಿನ ನಾಡಿನ ವಿವಿಧ ಹುದ್ದೆಗಳನ್ನಿ ಅಲಂಕರಿಸಿದ್ದಾರೆ. ಶ್ರೀಕ್ಷೇತ್ರದಲ್ಲಿನ ವಿದ್ಯಾರ್ಜನೆ ಮಾಡಿದ ವಿದ್ಯಾರ್ಥಿಗಳು ತಮ್ಮ ಕುಟುಂಬಕ್ಕೂ ಮತ್ತು ಮಠಕ್ಕೂ ಕೀರ್ತಿ ತಂದಿದ್ದಾರೆ. ಶ್ರೀ ಇಮ್ಮಡಿ ಮಹಾಲಿಂಗಸ್ವಾಮಿಗಳವರ ಮಹತ್ ಸಾಧನೆಗೆ ಸಿದ್ಧಗಂಗೆಯ ತ್ರಿವಿಧ ದಾಸೋಹ ಮೂರ್ತಿಗಳಾದ ಪರಮಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವರ ಮಾರ್ಗದರ್ಶನವನ್ನು ಮರೆಯುವಂತಿಲ್ಲ. ಸಮಾಜದ ಏಳ್ಗೆಗಾಗಿ ಮತ್ತು ಗ್ರಾಮೀಣದ ವಿದ್ಯಾರ್ಥಿಗಳ ಅಭ್ಯುದಯಕ್ಕೆ ತಮ್ಮನ್ನು ತಾವೇ ಸಮರ್ಪಿಸಿಕೊಂಡಿದ್ದ ಶ್ರೀಮಹಾಲಿಂಗಸ್ವಾಮಿಗಳು ಗಂಧದ ಕೊರಡಿನಂತೆ ತಮ್ಮ ಮಾನಸಿಕ ಆಯಾಸವನ್ನು ಲೆಕ್ಕಿಸದೇ ಸದಾ ತಮ್ಮ ಉಸಿರನ್ನು ಅಂಧಕಾರದಲ್ಲಿ ಮುಳುಗಿದ್ದ ಸಮಾಜವನ್ನು ಎಚ್ಚರಿಸಲು ಸದ್ವಿನಿಯೋಗಿಸಿದರು. ಅವರ ಬದುಕನ್ನು ತಿದ್ದುವಂತ ಜಂಗಮರಾಗಿ ಲೋಕ ಸಂಸಾರವೇ ತಮ್ಮ ಕಾರ್ಯಕ್ಷೇತ್ರವನ್ನಾಗಿ ಮಾಡಿಕೊಂಡು ಅಜ್ಞಾನದ ಕತ್ತಲೆಯನ್ನೋಡಿಸಿ, ಸುಜ್ಞಾನವೆಂಬ ಸುಧೆಯನ್ನುಣಿಸಿ ನಿರುಪಮ ನಿರಂಜನ ಪರಬ್ರಹ್ಮ ರೂಪವೇ ಆಗಿ, ಮಾನವ ರೂಪದಿಂದ ಧರೆಯೊಳಗೆ ಅವತರಿಸಿ, ಜ್ಞಾನದ ಹಸಿವಿದ್ದವರಿಗೆ ಸುಜ್ಞಾನದ ಧಾರೆಯೆರೆದು ಭವದುಃಖದ ಬಾಧೆಯನ್ನು ಕಳೆದು ಭಕ್ತರನ್ನುದ್ಧಾರ ಮಾಡಿದ ಶ್ರೀ ಮಹಾಲಿಂಗಸ್ವಾಮಿಗಳು ತಮ್ಮ ಎಲ್ಲಾ ಇಹಲೋಕದ ಸಾಧನೆಯ ಫಲ ವನ್ನು ಶ್ರೀ ದೇಗುಲಮಠದ ಸರ್ವ ಅಧಿಕಾರವನ್ನು ಈಗಿನ ಮಠಾಧ್ಯಕ್ಷರಾದ ಪೂಜ್ಯ ಶ್ರೀ ಮುಮ್ಮಡಿ ನಿರ್ವಾಣಸ್ವಾಮಿ ಗಳವರಿಗೆ ವಹಿಸಿಕೊಟ್ಟು ಶಿವನ ಬೆಳಕಿನ ಕಡೆ ಹೊರಟು ಮಹಾಲಿಂಗದಲ್ಲಿ ಲೀನರಾಗಿ, ಭಕ್ತ ಸಮೂಹಕ್ಕೆ ಮಹಾ ಬೆಳಕಾಗಿ ಪ್ರತಿನಿತ್ಯವೂ ಪ್ರಾತಃಸ್ಮರಣಯ ಪ್ರಾಂಜಲ ಜ್ಯೋತಿಯಾಗಿದ್ದಾರೆ.

*

**ವಚನ**

"ಚಿನ್ಮಯ, ಚಿತ್‌ಪ್ರಕಾಶ, ಚಿದಾನಂದ ಲಿಂಗವೆ,
ಎನ್ನ ಹೃದಯ ಕಮಲದಲ್ಲಿ, ಬೆಳಗಿ ತೋರುವ,
ಪರಂಜ್ಯೋತಿ. ಎನ್ನಕರಸ್ಥಲಕ್ಕನುವಾದ ಧರ್ಮಿ.
ಎನ್ನ ಕಂಗಳ ಕೊನೆಯಲ್ಲಿ
ಮೂರ್ತಿಗೊಂಡಿಪ್ಪೆಯಯ್ಯಾ,
ಕೂಡಲಸಂಗಮದೇವ"

–ಬಸವಣ್ಣ





## ಅವಲೋಕನ

### ಡಾ॥ ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳ ಗೌರವ ಅತಿಥಿ ಸಂಪಾದಕೀಯ

ಅವಾಗಲೂ ಜಾಗರವಿದ್ದು ಸಸಿಯ ಸಲಹುವ' ಕಾಯಕ ಜೀವಿಯಾದ ಪತ್ರಿಕಾ ಸಂಪಾದಕ ಸಮಾಜದ ಆಸ್ತಿ. ಬಹು ಶ್ರುತ, ನಿರಂತರ ಅಧ್ಯಯನಶೀಲ. ಜನಮನವನ್ನು ಸೂಕ್ಷ್ಮವಾಗಿ ಅರಿಯುವ ಕಲೆ, ಕಂಡುದನ್ನು ನೇರವಾದ ನುಡಿಗಳಲ್ಲಿ ಹೇಳುವ ಶೈಲಿ, ಅಂತರಂಗ ಬಹಿರಂಗಗಳಲ್ಲಿ ಪ್ರಾಮಾಣಿಕತೆಯನ್ನು ಸಂರಕ್ಷಿಸುಕೊಳ್ಳುವ ಎಚ್ಚರ, ವೃತ್ತಿ ಧರ್ಮಕ್ಕೆ ಚ್ಯುತಿಯನ್ನುಂಟುಮಾಡದ ಮನೋಧರ್ಮ, ಆಸೆ ಅಮಿಷಗಳಿಗೆ ಪ್ರಲೋಭಿತನಾಗದಿರುವ ಪ್ರವೃತ್ತಿ, ಪತ್ರಿಕಾ ವ್ಯವಸಾಯದಲ್ಲಿ ಪ್ರಸಿದ್ಧಿಗಳಿಸಿದ ಹಿರಿಯರು ನಡೆದು ಬಂದ ಸೇವಾ ಪಥದ ಆದರ್ಶವನ್ನು ಅನುಸರಿಸುವ ಶ್ರದ್ಧೆ, 'ಜನ ಬದುಕಬೇಕೆಂಬ' ಕಲ್ಯಾಣದೃಷ್ಟಿ ಸಂಪಾದಕನಿಗಿರಬೇಕಾದ ಗುಣ ವಿಶೇಷಣಗಳು –ಶ್ರೀ ನಾಗಣ್ಣ ಇವೆಲ್ಲವುಗಳನ್ನು ತಮ್ಮದಾಗಿಸಿಕೊಂಡು ಇದೀಗ ಹೊಸ ಹೆಜ್ಜೆಯನ್ನಿಡುತ್ತಿರುವುದು ಶ್ಲಾಘನೀಯ ವಾದುದಾಗಿದೆ.

ಜಿಲ್ಲಾ ಪತ್ರಿಕಾ ರಂಗದಲ್ಲಿ 'ಪ್ರಜಾಪ್ರಗತಿ' ಪತ್ರಿಕೆ ನಡೆದು ಬಂದ ದಾರಿ ಅಪೇಕ್ಷಣೀಯ ಮಾತ್ರವಲ್ಲ ಪರಂತೂ ಅನುಕರಣೀಯವೂ ಹೌದು. ಮೊದಲಿನಿಂದಲೂ ಇದು ತನ್ನ ಪತ್ರಿಕಾಧರ್ಮವನ್ನು ಕಾಪಾಡಿಕೊಂಡೇ ಬಂದಿದೆ. ಅಪಾರವಾದ ಜನಪರ ಕಾಳಜಿಯನ್ನು ಹೊಂದಿದ್ದು, ಸಮಾಜದ ಎಲ್ಲ ಸ್ತರಗಳ ಜನರ ಆಶೋತ್ತರಗಳಿಗೆ ಸ್ಪಂದಿಸುತ್ತಾ ಬಂದಿದೆ. ಶ್ರೀಸಾಮಾನ್ಯರ ಬಗ್ಗೆ ಇರುವ ಕಳಕಳಿ ಪ್ರಶಂಸನೀಯ. ಜಿಲ್ಲೆಯ ಸಾಮಾಜಿಕ, ಶೈಕ್ಷಣಿಕ, ಧಾರ್ಮಿಕ, ಸಾಹಿತ್ಯಿಕ, ಸಾಂಸ್ಕೃತಿಕ, ರಾಜಕೀಯ ಕ್ರೀಡೆ ಹಾಗೂ ಲಲಿತಕಲೆ ಮುಂತಾದ ಮಹತ್ವದ ವಿಷಯಗಳನ್ನು ಕುರಿತು ಬೆಳಕು ಚೆಲ್ಲುವ ಬಗ್ಗೆ ಸಾಮಾಜಿಕ ನ್ಯಾಯ ದೊರಕಿರುವ ಬಗ್ಗೆ ಪತ್ರಿಕೆ ವಹಿಸಿರುವ ಪಾತ್ರ ಪ್ರಶಂಸನೀಯ ವಾದುದು. ಸಾಮಾಜಿಕ ಆಶೋತ್ತರಗಳಿಗೆ ಸ್ಪಂದಿಸಿದ ರೀತಿ ಅನನ್ಯ ವಾದುದು. ಪಂಚಾಯ್ತಿಯಿಂದ ಹಿಡಿದು ಜಿಲ್ಲಾಡಳಿತದ ಬಗ್ಗೆ, ಅಸಾಮಾನ್ಯರಿಂದ ಹಿಡಿದು ಶ್ರೀಸಾಮಾನ್ಯರ ಬಗ್ಗೆ, ಜಿಲ್ಲೆಯ ಸರ್ವತೋಮುಖ ಅಭಿವೃದ್ಧಿ ಬಗ್ಗೆ ಚಿಕಿತ್ಸಕ ಮನೋ ಧರ್ಮದಿಂದ ಪತ್ರಿಕೆ ವಹಿಸಿರುವ ಪಾತ್ರ ಅಭೂತಪೂರ್ವ ವಾದುದು. ಮಹಾತ್ಮಗಾಂಧೀಜಿಯವರ ಸರ್ವೋದಯ ತತ್ವವನ್ನು ಪ್ರತಿಪಾದಿಸುತ್ತಾ, ಪತ್ರಿಕಾ ಧರ್ಮವನ್ನು ಅತ್ಯಂತ ಎಚ್ಚರಿಕೆಯಿಂದ ಕಾಪಾಡಿಕೊಳ್ಳುತ್ತಾ, ಸಮಕಾಲೀನ ಧರ್ಮದೊಂದಿಗೆ ಸಕಾಲಿಕ ಜಾಗೃತಿಯಿಂದ ಸ್ಪಂದಿಸುತ್ತಾ, ಪತ್ರಿಕೆಯು ಜಿಲ್ಲೆಯ ಕೈಗನ್ನಡಿಯಾಗಿ ಬೆಳಗುತ್ತಿದೆ.

ಭಾರತ ಒಂದು ವೈಶಿಷ್ಟ್ಯಪೂರ್ಣವಾದ ದೇಶ. ಅದು ಸ್ವಾತಂತ್ರ್ಯವನ್ನು ಕಂಡು ಆರು ದಶಕಗಳೇ ಆಗಿ ಹೋದವು. ಮುಟ್ಟಬೇಕಾಗಿದ್ದ ಸ್ವಾತಂತ್ರ್ಯದ ಫಲ ಜನತೆಗೆ ಇನ್ನೂ ಮುಟ್ಟಿಲ್ಲ. ಬಹಳಷ್ಟು ಮಂದಿ ಕನಿಷ್ಠ ಸೌಲಭ್ಯಗಳನ್ನು ಕಾಣದೆ ವಂಚಿತರಾಗಿ ಉಳಿದಿದ್ದಾರೆ. ಶೋಷಣೆಗೆ ಒಳಗಾದ ವರಿಗೆ, ಅನಕ್ಷರಸ್ಥರಿಗೆ, ನಿರ್ಗತಿಕರಿಗೆ ಸಾಮಾಜಿಕ ನ್ಯಾಯ ಒದಗಿಸುವಲ್ಲಿ ಪತ್ರಿಕೆಗಳು ಮುಂದಾಗಬೇಕಾಗಿದೆ. ಈ ನಿಟ್ಟಿನಲ್ಲಿ ಜಿಲ್ಲಾ ಪತ್ರಿಕೆಯಾದ 'ಪ್ರಜಾಪ್ರಗತಿ' ಅತ್ಯುತ್ತಮ ಕಾರ್ಯ ಮಾಡಿದೆ. ಯಾವ ಮುಲಾಜಿಗೂ ಒಳಗಾಗದೆ ನಿರ್ಭೀತಿಯಿಂದ ಕೆಲಸ ಮಾಡಿದೆ. ಮಿಗಿಲಾಗಿ ಪತ್ರಿಕೆಯ ಧ್ಯೇಯ ಧೋರಣೆಗಳು ಮೆಚ್ಚುವಂತವು. ರಾಜ್ಯದಲ್ಲಿ ಪತ್ರಿಕೆಗಳು ದರ ಸಮರ ನಡೆಸಿ, ಪೈಪೋಟಿಗೆ ನಿಂತಾಗ ಈ ಜಿಲ್ಲಾ ಪತ್ರಿಕೆಗಳು ಉಳಿಯಬಲ್ಲವೇ ? ಎಂಬ ಆತಂಕ ನಮ್ಮಲ್ಲಿ ಮೂಡಿತ್ತು. ಆ ಸಂದರ್ಭದಲ್ಲಿ ಪ್ರಜಾಪ್ರಗತಿ ಕಾಲ ಧರ್ಮಕ್ಕೆ ಸ್ಪಂದಿಸಿ, ಮೃತ್ಯುಂಜಯನಂತೆ ನಿಂತಿತು. ತನ ಜನಪ್ರಿಯತೆಯನ್ನು ಉಳಿಸಿಕೊಂಡಿತು. ವಾಚಕ ಮಹಾಶಯರ ಒಲವನ್ನು ಇಮ್ಮಡಿಗೊಳಿಸಿಕೊಂಡಿತು. ಪತ್ರಿಕೆ 22ನೇ ವರ್ಷದಲ್ಲಿ ಪಾದಾರ್ಪಣೆ ಮಾಡಿದ್ದು, ಒಂದು ದಿನವೂ ನಿಲ್ಲದೆ, ಸಕಾಲದಲ್ಲಿ ಸರ್ವಾಂಗ ಪರಿಪುಷ್ಟವಾಗಿ ತುಂಬಿ ಬಂದು ಜನಮೆಚ್ಚಿದ ಪತ್ರಿಕೆಯಾಗಿ ಮುನ್ನಡೆ ಸಾಧಿಸಿರುವುದು ಸಂತಸದ ವಿಷಯವಾಗಿದೆ.

ಪತ್ರಿಕೆಯ ಪ್ರಗತಿಗೆ ಸಂಪಾದಕ ಎಸ್. ನಾಗಣ್ಣ ಬಹುಮಟ್ಟಿಗೆ ಕಾರಣಕರ್ತರು, ಪತ್ರಿಕೋದ್ಯಮವನ್ನು ಕಾಯಕವಾಗಿ ಸ್ವೀಕರಿಸಿ, ವೃತ್ತಿ ಧರ್ಮವನ್ನು ಕಾಪಾಡಿಕೊಂಡು, ಪ್ರಜಾಪ್ರಗತಿಯ ಜನಕರೆಂದು ಅಭಿದಾನಕ್ಕೆ ಪಾತ್ರರಾಗಿದ್ದಾರೆ. ಅವರು ಹಿಂದೆ ನಮ್ಮಲ್ಲಿ ಶಿಕ್ಷಕವೃತ್ತಿಯನ್ನು ಮಾಡಿದವರು. ಶ್ರೀ ಕ್ಷೇತ್ರದ ಪ್ರೌಢಶಾಲೆಯಲ್ಲಿ ಹಲವಾರು ವರ್ಷಗಳ ಕಾಲ ಸೇವೆಯನ್ನು ಮಾಡಿ, ಪತ್ರಿಕಾರಂಗ ಪ್ರವೇಶಿಸಿದರು. ಮೊದಲು ನಮಗೂ ಕೊಂಚ ಸಂದೇಹವಿತ್ತು. ಶಿಕ್ಷಕ ವೃತ್ತಿಯ ನಾಗಣ್ಣ ಪತ್ರಿಕಾ ಸಂಪಾದಕರಾಗಿ ಯಶಸ್ಸು ಪಡೆಯಬಲ್ಲರೇ ಎಂದು. ನಿಜಕ್ಕೂ ಅವರು ಗುರಿಮುಟ್ಟುವಲ್ಲಿ ಯಶಸ್ವಿಯಾಗಿದ್ದಾರೆ. ಪತ್ರಿಕೆಗೆ ಒಂದು ನೈತಿಕಬಲ ತಂದುಕೊಟ್ಟಿದ್ದಾರೆ. ಕೀರ್ತಿಶೇಷ ಸಿ.ಎನ್. ಭಾಸ್ಕರಪ್ಪ ಕಂಡ ಕನಸನ್ನು ನನಸು ಮಾಡಿದ್ದಾರೆ. ಅವರ ಋಣ ತೀರಿಸುವಲ್ಲಿ ಪ್ರಾಮಾಣಿಕ ಪ್ರಯತ್ನ ಮಾಡಿದ್ದಾರೆ. ಶರಣರು ಅರಿವೇ ಗುರು ಎಂದರು. ಅರಿವನ್ನು ನಮ್ಮದಾಗಿಸಿಕೊಳ್ಳಲು ಅಹರ್ನಿಶಿ ಶ್ರಮಿಸುವ ಶ್ರದ್ಧಾಳುಗಳು ಎಲ್ಲರೂ ಬದುಕಿನಲ್ಲಿ ಸಾರ್ಥಕತೆಯನ್ನು ಕಂಡವರಾಗಿದ್ದಾರೆ.

ಜಿಲ್ಲಾ ಪತ್ರಿಕೆಯಾದ 'ಪ್ರಜಾಪ್ರಗತಿ' ಈವರೆವಿಗೂ ಜಿಲ್ಲೆಯ ಜನರ ಪತ್ರಿಕೆಯಾಗಿತ್ತು. ಅದು ಇಂದು ಪ್ರಸರಣ ಬಾಹುಳ್ಯವನ್ನು ಆಧುನಿಕ ತಂತ್ರಜ್ಞಾನದ ಮೂಲಕ ವಿಶ್ವವ್ಯಾಪ್ತಿ ಪಡೆಯುತ್ತಿದೆ. ಜಗತ್ತಿನ ಯಾವುದೇ ಮೂಲೆಯಲ್ಲಿರುವ ಕನ್ನಡ ಬಲ್ಲವರು ಇಂಟರ್‌ನೆಟ್ ಸೌಲಭ್ಯದಿಂದ ಈ ಪತ್ರಿಕೆ ಯನ್ನು ಓದಬಹುದಾಗಿದೆ. ತಾಂತ್ರಿಕತೆಯಲ್ಲಿ ದಿನದಿನವೂ ಹೊಸದನ್ನು ಸೃಷ್ಟಿಸುವ ಈ ದಿನಗಳಲ್ಲಿ 'ಪ್ರಜಾಪ್ರಗತಿ' ಹೊಸ ತಂತ್ರಜ್ಞತೆಯಲ್ಲಿ ಗಮಿಸಲಿ ಎಂದು ಹಾರೈಸುತ್ತೇವೆ. ಹೀಗೆ ಪ್ರಜಾಪ್ರಗತಿ ತನ್ನ ಪ್ರಗತಿಯ ದಿಟ್ಟ ಅಡಿಗಳನ್ನಿಟ್ಟ ಸಂದರ್ಭದಲ್ಲಿ ಪತ್ರಿಕೆಗೂ, ವಾಚಕರಿಗೂ, ಅಭಿಮಾನಿ ಗಳಿಗೂ ಗೌರವ ಅತಿಥಿ ಸಂಪಾದಕ ಸ್ಥಾನದಿಂದ ಶುಭವನ್ನು ಹಾರೈಸುತ್ತೇವೆ. *

**ಶ್ರೀವಾಣಿ**

ದೊಡ್ಡವನಾಗಲಿ, ಚಿಕ್ಕವನಾಗಲಿ, ಆಳಾಗಲಿ, ಅರಸನಾಗಲಿ, ಬಡವನಾಗಲಿ, ಶ್ರೀಮಂತನಾಗಲಿ ತಾನು ಮಾಡುವ ಕರ್ತವ್ಯವನ್ನು ಶ್ರದ್ಧೆಯಿಂದ ನಿಷ್ಠೆಯಿಂದ ಮಾಡಬೇಕು. ವಿದ್ಯಾರ್ಥಿ ವಿದ್ಯಾರ್ಥಿಯ ಲಕ್ಷಣವನ್ನು ಚೆನ್ನಾಗಿ ಅಳವಡಿಸಿಕೊಂಡು ತನ್ನ ಕರ್ತವ್ಯವನ್ನು ಚೆನ್ನಾಗಿ ಮಾಡಿದರೆ ಅದು ನಿಜಕ್ಕೂ ದೊಡ್ಡ ರಾಷ್ಟ್ರಸೇವೆ. ಅಂದಮೇಲೆ ರಾಷ್ಟ್ರ ಕಟ್ಟಬೇಕಾದರೆ ಈ ಜವಾಬ್ದಾರಿಯ ಪ್ರಜ್ಞೆ ಮೂಡಿದಾಗ; ಎಲ್ಲರೂ ಆ ಬಗ್ಗೆ ಚಿಂತನೆ ಮಾಡುವ ತಿಳುವಳಿಕೆ ಬಂದಾಗ ಮಾತ್ರ ದೇಶ ಉದ್ಧಾರವಾಗುತ್ತದೆ. ದೊಡ್ಡವರ ಒಂದು ಮಾತು ಹೀಗಿದೆ –'Each man is great in his own place' 'ಪ್ರತಿಯೊಬ್ಬನೂ ಅವನ ಸ್ಥಾನದಲ್ಲಿ ದೊಡ್ಡವನೇ' ಅದಕ್ಕಾಗಿ ಪ್ರತಿಯೊಬ್ಬ ವ್ಯಕ್ತಿ ತನ್ನ ಸ್ಥಾನದಲ್ಲಿ ತಾನು ಮಾಡಬೇಕಾಗಿರುವ ಕರ್ತವ್ಯವನ್ನು ಚೆನ್ನಾಗಿ ಮಾಡುವುದೇ ನಿಜವಾದ ರಾಷ್ಟ್ರಸೇವೆ. ಕುಟುಂಬದಲ್ಲಿರುವ ಪ್ರತಿಯೊಬ್ಬರು ಚೆನ್ನಾಗಿರಬೇಕೆಂಬ ದೃಷ್ಟಿಯಿಂದ ಕೆಲಸ ಮಾಡಿದರೆ ಆಗ ಸಮೃದ್ಧಿಯಾದ ಒಂದು ಕುಟುಂಬವಾಗುತ್ತದೆ. ಆ ಕುಟುಂಬ ರಾಷ್ಟ್ರದ ಒಂದು ಅಂಗ ಎಂಬುದನ್ನು ಮರೆಯಬಾರದು. ಬರೀ ಮಾತಿನಿಂದ ರಾಷ್ಟ್ರದ ಉದ್ಧಾರವಾಗುವುದಿಲ್ಲ.





## ಬದುಕಿಗೊಂದು ಗುರಿ ಅದುವೇ ಪರಮ ಗುರಿ

–ಡಾ॥ ರಾಜಶೇಖರ ಜಮದಂಡಿ
ಅಧ್ಯಾಪಕರು,
ಜೆ.ಎಸ್.ಎಸ್. ಮಹಿಳಾ ಕಾಲೇಜು, ಕನ್ನಡ
ಸ್ನಾತಕೋತ್ತರ ವಿಭಾಗ, ಚಾಮರಾಜನಗರ.

ಮನುಷ್ಯ ನಡೆಸುವ ಪ್ರತಿಯೊಂದು ವ್ಯವಹಾರದಲ್ಲಿಯೂ ಒಂದು ಪರಮಗುರಿ ಇರಲೇಬೇಕು. ಗುರಿಯಿಲ್ಲದ ಬಾಳು ಹಾಳು. ಚೂಪಾದ ಬಾಣಕ್ಕೆ ಗಟ್ಟಿಮುಟ್ಟಾದ ಬಿಲ್ಲು ಹೇಗೆ ಮುಖ್ಯವೋ ಹಾಗೆ ಜೀವನದಲ್ಲಿ ಮಹತ್ವದ ಗುರಿಗಳಿದ್ದರೇನು ಪ್ರಯೋಜನ. ಗುರಿಯಿಲ್ಲದಿದ್ದರೆ ಬರಿಯ ತಾರಾಟ, ತೂರಾಟ ದಲ್ಲಿಯೇ ನಮ್ಮ ಶಕ್ತಿ–ಸಾಮರ್ಥ್ಯಗಳು ವ್ಯಯವಾಗಿಬಿಡುತ್ತವೆ. 'ಸಿರಿಗಳಿಸಿ ಫಲವೇನು ಗುರಿಗಳಿಸದನ್ನಕ್ಕ, ಅರ್ಥಗಳಿಸಿ ಫಲವೇನು ಆಯುಷ್ಯವಿಲ್ಲದನ್ನಕ್ಕ' ಎನ್ನುವಂತೆ ಹಾಗೂ ಬಾಳೆಗಿಡಕ್ಕೊಂದು ಬಾಳೆಗೊನೆ ಇರುವಂತೆ ಬಾಳಿಗೊಂದು ಗುರಿ ಇರಲೇಬೇಕು.

ಹೀಗೆ ಇರಬೇಕೆಂದರೆ ಅದನ್ನು ನಿರ್ಧರಿಸೋರು ಯಾರು? ಸೃಷ್ಟಿಯ ಕೋಟಿ ಕೋಟಿ ಜೀವರಾಶಿಗಳಲ್ಲಿ ಒಬ್ಬ ರಾದ ಮನುಷ್ಯನ ಬಗ್ಗೆ ಸೃಷ್ಟಿಗೇನು ಕಾಳಜಿ? ಜೀವನದಲ್ಲಿ ಗುರಿಯಿಟ್ಟುಕೊಂಡು ಅದನ್ನು ಸಾಧಿಸಲು ಸರ್ವಶಕ್ತಿ ಬಳಸಿ ಮತ್ತು ಮತ್ತೆ ಪ್ರಯತ್ನಿಸುವುದೊಂದೇ ನಾವು ಮಾಡಬಹು ದಾದ ದೊಡ್ಡ ಕೆಲಸ. ಆಧುನಿಕ ವಚನಕಾರರಾದ ಶ್ರೀ ಸಿದ್ದಯ್ಯ ಪುರಾಣಿಕರು ಬದುಕಿನ ಗುರಿಯ ಬಗ್ಗೆ ಹೀಗೆ ಹೇಳಿದ್ದಾರೆ;

*ಅಕ್ಷರಗಳಿಗೆ ಅರ್ಥ ಬರುವುದು*
*ವಸ್ತುವೊಂದಕ್ಕೆ ಅವು ಅನ್ವಯಿಸಿದಾಗ*
*ಸೊನ್ನೆಗಳಿಗೆ ಅರ್ಥ ಬರುವುದು*
*ಅಂಕೆಯೊಂದಕ್ಕೆ ಅವು ಅನ್ವಯಿಸಿದಾಗ*
*ರೇಖೆಗಳಿಗೆ ಗಣ್ಯತೆ ಬರುವುದು*
*ಅವು ಆಕೃತಿಯೊಂದನ್ನು ರೂಪಿಸಿದಾಗ*
*ಬಾಳಿಗೆ ಗೌರವ ಬರುವುದು*
*ಒಳ್ಳೆಯ ಗುರಿಯೊಂದಕ್ಕೆ ಅಂಟಿ ಬದುಕಿದಾಗ*
*ಸ್ವತಂತ್ರ ಧೀರ ಸಿದ್ಧೇಶ್ವರ.*

ಮಹಾನ್ ಸಾಧಕನಾದ ಏಕಲವ್ಯನಿಗೆ ಅದೆಷ್ಟು ಕಷ್ಟಗಳು ಬಂದಾಗ್ಯೂ ಎದೆಗುಂದದೆ, ಸತತ ಪರಿಶ್ರಮದಿಂದ, ಪರಿಣಾಮ ಕಾರಿಯಾದ ಛಲದಿಂದ ತಾನು ಮುಟ್ಟಬೇಕಾದ ಗುರಿಯನ್ನು ಸಾಧಿಸಿಯೇ ತೀರಬೇಕೆಂಬ ಆತನ ಅಚಲ ನಿಷ್ಠೆಯ ಗುಣವೇ ನಮಗೆ ಆದರ್ಶವಾಗಿದೆ. ಒಂದು ಒಳ್ಳೆಯ ಗುರಿಯನ್ನು ತಲುಪಬೇಕಾದರೆ ಒಳ್ಳೆಯ ಚಿಂತನೆ ಬೇಕು ಮತ್ತು ಸದ್ಗುಣಗಳೂ ಬೇಕು. ಒಳ್ಳೆಯ ಚಿಂತನೆಯೆಂಬ ಗಿಡ ನೆಟ್ಟಾಗ ಅದರಿಂದ ಉತ್ತಮ ಫಲ ದೊರೆಯುತ್ತದೆ. ನಮ್ಮ ಚಿಂತನೆಗಳು ಧನಾತ್ಮಕವಾದಾಗ ಅತ್ಯುನ್ನತ ಯಶಸ್ಸು–ಕೀರ್ತಿ ಪಡೆದುಕೊಳ್ಳು ವುದರಲ್ಲಿ ಸಂಶಯವಿಲ್ಲ.

ನಾವು ಏನು ಮಾಡಲಿ, ಮಾಡದಿರಲಿ ಕಾಲ ಮಾತ್ರ ಮುಂದುವರೆಯುತ್ತಿರುತ್ತದೆ. ಆದ್ದರಿಂದ ಮುಟ್ಟಬೇಕಾದ ಗುರಿಯ ಬಗೆಗೆ ಸರಿಯಾದ ತೀರ್ಮಾನ ಕೈಗೊಳ್ಳುವುದರಲ್ಲಿ ಮನಸ್ಸನ್ನು ಕೇಂದ್ರೀಕರಿಸಬೇಕು. ಒಂದೆಡೆ ಶ್ರೀಯುತ ಪಾಟೀಲ್ ಪುಟ್ಟಪ್ಪನವರು ಈ ರೀತಿ ಹೇಳಿದ್ದಾರೆ; 'ಬದುಕು ನಕಾರಾತ್ಮಕವಲ್ಲ, ಅದು ಸಕಾರಾತ್ಮಕವಾಗಿದೆ. ಒಂದೂ ಕೆಲಸ ವಾಗದೆಂದು ಬಡಿವಾರ ಮಾಡುವವರನ್ನು ಕಂಡರೆ ನನಗಾವುದಿಲ್ಲ. ಓದದೇ ಇದ್ದವನು ಪರೀಕ್ಷೆಯಲ್ಲಿ ಪಾಸಾಗಬೇಕೆಂದರೆ ಹೇಗೆ ? ಪ್ರಾಮಾಣಿಕವಾಗಿ ದುಡಿಯದೇ ಹೆಚ್ಚು ಗಳಿಸಬೇಕೆಂದರೆ ಹೇಗೆ?' ಎಂದು ಪ್ರಶ್ನಿಸಿದ್ದಾರೆ. ಮನುಷ್ಯ ಎಷ್ಟು ವರ್ಷ ಜೀವಿಸಿದ್ದ ಎನ್ನು ವುದಕ್ಕಿಂತ ತನ್ನ ಜೀವಿತಾವಧಿಯಲ್ಲಿ ಏನು ಮಾಡಿದ? ಎಂತೆಂತಹ ಗುರಿಗಳನ್ನು ಮುಟ್ಟಿದ? ಎನ್ನುವುದು ಮುಖ್ಯ ಉದಾಹರಣೆಗೆ: ಒಬ್ಬ ವಿದ್ಯಾರ್ಥಿ ಪಿಯುಸಿಯಲ್ಲಿ ಪ್ರತಿಭಾವಂತನಾಗಿದ್ದನೆಂದು ಇಟ್ಟು ಕೊಳ್ಳೋಣ. ಆಟೋಟ ಮತ್ತು ಪಠ್ಯೇತರ ಚಟುವಟಿಕೆಗಳಲ್ಲಿ ಹೆಚ್ಚಿನ ಸಮಯ ಕಳೆದು ಕಾಲೇಜಿಗೆ ಹತ್ತು ಹಲವು ವಾರ್ಷಿಕ ಪರೀಕ್ಷೆಯಲ್ಲಿ ಗಣಿತದ ವಿಷಯದಲ್ಲಿ ಕೇವಲ ೪೫ ಅಂಕಗಳು ಬಂದಿದ್ದವು. ಅವನ ನೆಚ್ಚಿನ ಅಧ್ಯಾಪಕರೊಬ್ಬರು ಅವನನ್ನು ಕರೆದು 'ನಿನ್ನ ಬಗ್ಗೆ ತುಂಬಾ ಭರವಸೆ ಯನ್ನಿಟ್ಟುಕೊಂಡಿದ್ದೆ ಇದೇನು ಇಷ್ಟು ಕಡಿಮೆ ಅಂಕ ಪಡೆದಿದ್ದೀಯಾ?' ಎಂದರು. ಅವರ ಮಾತುಗಳು ಆ ವಿದ್ಯಾರ್ಥಿಯ ಕಣ್ಣು ತೆರೆಸಿದವು. ಅಂದಿ ನಿಂದ ತನ್ನ ಗುರಿಯನ್ನು ಓದಿನ ಕಡೆಗೆ ಬದಲಾಯಿಸಿದ. ನಿತ್ಯವೂ ಸತತ ಅಭ್ಯಾಸ ಮಾಡಿದ್ದರಿಂದ ವರ್ಷದ ಕೊನೆಯ ಪರೀಕ್ಷೆಯಲ್ಲಿ ಸರಾಸರಿ ಶೇಕಡಾ ೮೦ ಅಂಕಗಳನ್ನು ಗಳಿಸಿದ್ದ. ಅದನ್ನು ತಿಳಿದ ಅದೇ ಅಧ್ಯಾಪಕರು ಆ ವಿದ್ಯಾರ್ಥಿಯ ಬೆನ್ನುತಟ್ಟಿ 'ನಿನ್ನಿಂದ ಇದನ್ನೇ ನಾನು ನಿರೀಕ್ಷಿಸಿದ್ದೆ. ನೀನು ಸರಿಯಾದ ಗುರಿಯನ್ನಿಟ್ಟುಕೊಂಡು ಸಾಧನೆ ಮಾಡಿದ್ದೀಯಾ. ನೀನು ಇನ್ನು ಮುಂದೆಯೂ ಹೆಚ್ಚಿನ ಸಾಧನೆ

ಮಾಡಬಲ್ಲೆ ಎಂಬ ಭಾವನೆ ನನ್ನದು ಎಂದೆಲ್ಲಾ ಪ್ರೋತ್ಸಾಹದ ಮಾತು ಗಳನ್ನಾಡಿದರು.

ಆದ್ದರಿಂದ ಗುರಿಯಿಲ್ಲದ ಜೀವನ ಮೂಗುದಾರವಿಲ್ಲದ ಎತ್ತಿನಂತೆ, ರೆಕ್ಕೆಯಿಲ್ಲದ ಹಕ್ಕಿಯಂತೆ, ಹಸಿರಿಲ್ಲದ ಬರಡು ಭೂಮಿಯಂತೆಯೇ ಸರಿ. ಸಾಕ್ರೇಟೀಸ್, ಬುದ್ಧ, ಬಸವಣ್ಣ, ಗಾಂಧಿ, ಐನ್‌ಸ್ಟೀನ್, ಮದರ್ ಥೆರಸಾ, ವಿವೇಕಾನಂದ ಮುಂತಾದವರೆಲ್ಲ ತಮ್ಮ ತಮ್ಮ ಕ್ಷೇತ್ರಗಳಲ್ಲಿ ಸತ್ಯ ಶೋಧನೆಗಾಗಿ ಹಗಲಿರುಳು ತಮ್ಮ ಬಾಳನ್ನೇ ಮುಡಿಪಿಟ್ಟು ಬದುಕಿದ ಅವರ ಉನ್ನತ ಬಾಳುವೆಯ ಪರಿ ನಮಗೆಲ್ಲಾ ದಾರಿದೀಪ. ಸ್ವಾಮಿ ವಿವೇಕಾನಂದರು ಒಂದೆಡೆ ಹೀಗೆ ಹೇಳಿದ್ದಾರೆ. 'ಈ ಬದುಕು ಅಲ್ಪಕಾಲೀನ. ಪ್ರಪಂಚದ ಬೆಡಗು-ಭಿನ್ನಾಣಗಳೆಲ್ಲಾ ತಾತ್ಕಾಲಿಕ. ಅನ್ಯರ ಸುಖಕ್ಕಾಗಿ ಯಾರು ಉತ್ತಮ ಗುರಿಯಿರಿಸಿಕೊಂಡು ಬದುಕುತ್ತಾರೋ ಅವರದು ನಿಜವಾದ ಬದುಕು. ಉಳಿದವರೆಲ್ಲರೂ ಜೀವಂತ ಶವಗಳಷ್ಟೇ ಎಂದು.

ನನ್ನ ದೃಷ್ಟಿಯಲ್ಲಿ ಪ್ರತಿಯೊಬ್ಬನೂ ಸಮಾಜದ ಉದ್ಧಾರಕ್ಕಾಗಿ ಪ್ರಕೃತಿಯೊಡನೆ ಅನ್ಯೋನ್ಯವಾಗಿ ಜೀವಿಸುವ ಗುರಿಯನ್ನು ಹೊಂದಿರಬೇಕು. ನಾವು ವಿವೇಚನೆಯುಳ್ಳ ಜವಾಬ್ದಾರಿಯುತ ಪ್ರಜೆಗಳಾಗಿ ಬಾಳದಿದ್ದರೆ ನಮಗೂ ಮತ್ತು ಕಲ್ಲು-ಮಣ್ಣಿಗೂ ಏನೂ ವ್ಯತ್ಯಾಸವಿಲ್ಲ. ಯಾವುದೇ ಗುರಿಯಿರಲಿ ಅದನ್ನು ಸಾಧಿಸುವುದರೊಂದಿಗೆ ಮಾನವತ್ವದ ಬೆಳವಣಿಗೆಗೆ ಸಹಾಯ ಮಾಡಬೇಕಷ್ಟೆ. ಉಸಿರಾಡುವುದಷ್ಟೇ ನಮ್ಮ ಪರಿಪೂರ್ಣ ಬದುಕಲ್ಲ. ಅದು ಒಂದು ಫಲಕಾರಿ ಮತ್ತು ಮೈನವಿರೇಳಿಸುವ ಅನುಭವವಷ್ಟೆ. ಇದನ್ನು ಬೇರೆಲ್ಲದರೊಂದಿಗೆ ಹಂಚಿಕೊಂಡು ಸವಿಯಬೇಕು.

ಎಲ್ಲಿ ಬರೀ ತೃಪ್ತಿ ಇದೆಯೋ ಅಲ್ಲಿ ಆಕಾಂಕ್ಷೆಗಳಿಲ್ಲ, ಗುರಿಗಳಿಲ್ಲ, ಜಾಣತನವೂ ಇಲ್ಲ. ಜೀವನದಲ್ಲಿ ನಮ್ಮ ಗುರಿ ಇನ್ನೊಬ್ಬರಿಗೆ ಮೋಸ ಮಾಡಿ ಗಳಿಸುವಂತಾಗಬಾರದು. ನಮ್ಮೆಲ್ಲ ಪ್ರಯತ್ನದಿಂದ ಗುರಿ ಸಾಧಿಸಬೇಕೇ ಹೊರತು ಮತ್ತೊಬ್ಬರ ಸಂತೋಷಕ್ಕೆ ಖಂಡಿತಾ ಅಡ್ಡಿ-ಆತಂಕವಾಗಬಾರದು. ಯಥಾ ರಾಜಾ ತಥಾ ಪ್ರಜಾ ಎನ್ನುವಂತೆ ಯಥಾ ಮನಸ್ಸು ತಥಾ ಗುರಿ ಆಗಿರುತ್ತದೆ. ನಮ್ಮ ಬದುಕಿನ ಗುರಿ ತ್ಯಾಗದಲ್ಲಿಯೂ ಇದೆಯೆಂಬುದನ್ನು ಯಾರೂ ಮರೆಯ ಬಾರದು. ಜೀವನದಲ್ಲಿ ಏನಾದರೂ ಗುರಿ ಸಾಧನೆ ಮಾಡುವವರಿಗೆ ಅನೇಕ ಮಹಾನ್ ವ್ಯಕ್ತಿಗಳ ಆದರ್ಶ ಗುಣಗಳನ್ನು ಒಮ್ಮೆ ಅವಲೋಕಿಸಿದರೆ ಸಾಕಲ್ಲವೆ ?

*

## ತಿರುಕ್ಕುರುಳ್

ಕನ್ನಡ ಅನುವಾದ : ನ. ಮುನಿಸ್ವಾಮಿ

ಅಧ್ಯಾಯ -೧೨

### ಸಮದರ್ಶಿತ್ವ

ಶತ್ರು, ಮಿತ್ರ, ಅಪರಿಚಿತರ ಬಳಿ ನಿಷ್ಪಕ್ಷಪಾತದಿ
ನಡೆವುದು ಅದೇ ಸಮದರ್ಶಿತ್ವ ಎನುವ
ಧರ್ಮವೆನಿಸುವುದು.

ಸಮದರ್ಶಿತ್ವವುಳ್ಳವನ ಸಂಪದವು ಅಳಿಯದೆ,
ಅವನ ಸಂತತಿಗೂ ಆಧಾರವಹುದು.

ಲೇಸನೇ ತಂದರೂ ಅನ್ಯಾಯದಲಿ ಬಂದ ಸಂಪದವ,
ಅಂದೇ ತೊಲಗಿಸಿ ಬಿಡುವುದು

ಯೋಗ್ಯರು ಯೋಗ್ಯಹೀನರು ಎಂಬುದನು, ಅಪರವರ
ವಂಶದ ಕೀರ್ತಿ ಅಪಕೀರ್ತಿಗಳಿಂದ ಅರಿವುದು.

ಬದುಕಿನಲಿ ಬಡತನವು ಸಿರಿತನವು ಇಲ್ಲದವುಗಳಲ್ಲ;
ಸಮಭಾವವುಳ್ಳ ಮನಸೇ ಉತ್ತಮರ ಭೂಷಣವು.

ಕೆಡುವೆ ನಾನೆಂಬುದನು ಅರಿವುದು, ತನ್ನ ಮನವು
ಅನ್ಯಾಯದಲಿ ಅಕಾರ್ಯವನೆಸಗಿದರೆ.

ಕೇಡೆಂದು ಜರಿಯದೀ ಜಗವು, ಋಜುತೆಯನು
ಹಿಡಿದು, ಧರ್ಮದಲಿ ನಡೆವವನ ಬಡತನವ.

ಸಮನಿಂತಳೆವ ತ್ರಾಸಿನೊಲು, ನ್ಯಾಯದಿಂದಲಿ
ನಡುವುದೇ ಉತ್ತಮರ ಭೂಷಣವು.

ಮನದಲಿ ಕೊಂಕುತನವಿಲ್ಲದಿರೆ, ಆಡುವ ನುಡಿಯೂ
ಕೊಂಕುತನವಿಲ್ಲದೆ ಋಜುತೆಯಿಂದಿರುವುದು.

ವಣಿಜರಿಗೆ ಅದೊಂದು ಒಳ್ಳೆಯ ವ್ಯಾಪಾರವೆನಿಸುವುದು,
ಅನ್ಯರ ವಸ್ತುವನೂ ತಮ್ಮದಂತೆ ರಕ್ಷಿಪುದು.





# ಅರಿವಿಗೆ ನಿಲುಕದಿಹ ಗುರುಗಳ ಮಹಿಮೆ

-ಕೆ.ಜಿ. ರಂಗಯ್ಯ, ನಿವೃತ್ತ ಮುಖ್ಯಶಿಕ್ಷಕರು, ಕೆಂಕೆರೆಪಾಳ್ಯ, ಸುಗ್ಗನಹಳ್ಳಿ ಅಂಚೆ, ಮಾಗಡಿ ತಾ॥, ರಾಮನಗರ ಜಿಲ್ಲೆ.

ಪರೀಕ್ಷೆಗಳು ಸಮೀಪಿಸುತ್ತಿದ್ದ ಸಂದರ್ಭಗಳಲ್ಲಿ ರಜಾದಿನಗಳಂದು ನಾವು ಒಬ್ಬಿಬ್ಬರು ಒಟ್ಟುಗೂಡಿ ಓದಲು ಪ್ರಶಾಂತ ವಾದ ಸ್ಥಳಗಳನ್ನರಸಿ ಮಧ್ಯಾಹ್ನದ ಊಟದ ನಂತರ ಹೋಗು ತ್ತಿದ್ದುದು ರೂಢಿಯಲ್ಲಿತ್ತು. ಹೀಗೆ ಹುಡುಕಿಕೊಂಡ ಜಾಗಗಳಲ್ಲಿ ನಮ್ಮ ಅತ್ಯಂತ ಮೆಚ್ಚಿನ ತಾಣ ಉದ್ಯಾನಶ್ರೀಶ್ರೀ ಗಳವರ ಕಟ್ಟೆಯಾಚೆಗಿನ ಬೆಟ್ಟದ ತಪ್ಪಲಿನಲ್ಲಿದ್ದ ಪ್ರಶಾಂತವಾದ ಒಂದು ಗವಿ. ಆ ಗವಿ ಒಂದು ಚಿಕ್ಕ ಕುಟುಂಬದ ವಾಸ್ತವ್ಯಕ್ಕೆ ಅನುಕೂಲ ಕರವಾಗಿತ್ತೆಂಬುದು ನಿಜ. ಅದು ಹಿಂದೆ ಯಾವ ಸಿದ್ಧಪುರುಷರ ಏಕಾಂತದ ತಪಸ್ಸಿನ ನೆಲೆಯಾಗಿತ್ತೋ? ಬಲ್ಲವರಾರು ? ಅಲ್ಲಿ ಆಗ್ಗೆ ನಾರಾಯಣಪ್ಪ ಎಂಬೊಬ್ಬ ಕಟ್ಟಿಗೆ ಕಾಯಕದ ಶ್ರಮಜೀವಿ ತನ್ನ ಎರಡು ಪುಟ್ಟ ಮಕ್ಕಳು ಮತ್ತು ಪತ್ನಿಯೊಡನೆ ವಾಸವಿದ್ದ. ಗವಿಯ ಬಾಗಿಲಿಗೆ ಒಂದು ಮುಳ್ಳು ತಟಿಕೆಯ ಕದ; ನೆಲಕ್ಕೆ ಸೆಗಣಿ ನೀರಿನ ಸಾರಣೆ. ಶರಣನೊಬ್ಬನ ಅಚ್ಚುಕಟ್ಟಾದ ಚಿಕ್ಕಚೊಕ್ಕ ಸಂಸಾರವದು. ಓದಲೆಂದು ಆಯೆಡೆಗೆ ಹೋಗಿ ಬರುತ್ತಿದ್ದ ನಮಗೆ ಆತನ ಪರಿಚಯ ಹಾಗೂ ಆತನಿಗೆ ನಮ್ಮ ಪರಿಚಯವೂ ಇತ್ತಾದ್ದ ರಿಂದ ಅವನು ನಮ್ಮನ್ನು ಬಹಳ ಪ್ರೀತಿಯಿಂದ ಕಾಣುತ್ತಿದ್ದ. ಬೆಟ್ಟದ ತಪ್ಪಲಿನಲ್ಲಿ ಕಟ್ಟಿಗೆ ಕಡಿದು ಕ್ಯಾತ್ಸಂದ್ರದಲ್ಲಿ ಮಾರಿ ಜೀವನ ಸಾಗಿಸುತ್ತಿದ್ದ.

ಅಮಾವಾಸ್ಯೆಯ ಒಂದು ರಾತ್ರಿ ನನ್ನ ಮತ್ತು ನನ್ನ ರೂಮಿನ ಹಿರಿಯ ಗೆಳೆಯ ನಾರಾಯಣಸ್ವಾಮಿ (ಬೆಂಗಳೂರಿಗ) ಯ ನಡುವೆ ಒಂದು ಪಂದ್ಯವೇರ್ಪಟ್ಟಿತು. ಅದೇನೆಂದರೆ ಗೆಳೆಯ ಕೊಡುವ ಚೀಟಿಯನ್ನು ನಾನೊಬ್ಬನೇ ಕೊಟ್ಟು ಬರಬೇಕೆಂತಲೂ ಅದಕ್ಕೆ ಪ್ರತಿಯಾಗಿ ಅವನು ನನಗೆ ತನ್ನ ಪಾರ್ಕರ್ ಪೆನ್ನನ್ನು ಕೊಡುಗೆಯಾಗಿ ನೀಡುವುದೆಂತಲೂ ಒಪ್ಪಂದವೇರ್ಪಟ್ಟಿತು. ಒಂದು ವೇಳೆ ಪಂದ್ಯದಲ್ಲಿ ನಾನು ಸೋತರೆ, ಗೆಳೆಯನಿಗೆ ನನ್ನ ಇನ್‌ಸ್ಟ್ರುಮೆಂಟ್ ಬಾಕ್ಸನ್ನು ಕೊಡಬೇಕೆಂಬ ಷರತ್ತನ್ನು ವಿಧಿಸಲಾಯಿತು. ಇತರೆ ಷರತ್ತು ಗಳೆಂದರೆ ನಾನು ಒಂಟಿಯಾಗಿ ಹೋಗಬೇಕು; ದಾರಿಯಲ್ಲಿ ಹಾಡಿಕೊಂಡು ಹೋಗುವಂತಿಲ್ಲ. ಇತ್ಯಾದಿ ಇತ್ಯಾದಿ ಹಲವು ನಿಬಂಧನೆಗಳಿಗೆ ಎಲ್ಲರ ಮುಂದೆ ಒಪ್ಪಿದೆನು. ಏಕೆಂದರೆ ಸುಂದರವಾದ ಮತ್ತು ಬೆಲೆಬಾಳುವ ಅಂತಹ ಪೆನ್ನನ್ನು ಕೊಳ್ಳುವಷ್ಟು ಶ್ರೀಮಂತ ನಾನಿರಲಿಲ್ಲ. ಹಲವು ಷರತ್ತುಗಳನ್ನು ಗೆಳೆಯ ಒಡ್ಡಿದನಾದರೂ ಮನದಲ್ಲಿ ಶ್ರೀ ಶ್ರೀಗಳವರ ಅಥವಾ ಸಿದ್ಧಲಿಂಗೇಶ್ವರನ ಧ್ಯಾನ ಮಾಡುವಂತಿಲ್ಲವೆಂದು ಹೇಳದಿದ್ದುದೇ ನನಗೆ ಸಾಕಾಗಿತ್ತು. ಮನಸ್ಸಿನಲ್ಲಿ ಧೈರ್ಯ ತುಂಬಿಕೊಂಡು ಈ ಹಿಂದೆ ಹಲವು ಬಾರಿ ಓಡಾಡಿ ಕೊಂಡಿದ್ದ ತಾಣಕ್ಕೆ ಹೊರಟೇ ಬಿಟ್ಟೆನು. ಎಲ್ಲ ನಿಬಂಧನೆಗಳನ್ನು ಪಾಲಿಸಿ ಗೆಳೆಯ ಕೊಟ್ಟಿದ್ದ ಚೀಟಿಯನ್ನು ಹಿಡಿದು ಮುಳ್ಳುಕಂಟಿಗಳ ಇಕ್ಕಟ್ಟಿನ ಹಾದಿಯಲ್ಲಿ ಕತ್ತಲಲ್ಲಿ ಹಳ್ಳ ದಿಬ್ಬಗಳನ್ನು ಹಾದು, ಶ್ರೀ ಶ್ರೀಗಳವರನ್ನೇ ಮನದಲ್ಲಿ ನೆನೆಯುತ್ತಾ ಹೋಗಿ ಚೀಟಿಯನ್ನು ಒಪ್ಪಿಸಿ, ಎಲ್ಲ ವಿಷಯ ತಿಳಿಸಿ ವಾಪಸ್ ಹೊರಟು ನಿಂತಾಗ ನಾರಾಣಪ್ಪ ನನಗೆ ಬುದ್ಧಿವಾದ ಹೇಳಿದ್ದು ಹೀಗೆ- 'ಚಿಕ್ಕ ಮಕ್ಕಳು ಇಂತಹ ದುಃಸ್ಸಾಹಕ್ಕಿಳಿಯುವುದು ಸರಿಯಲ್ಲ. ಇಲ್ಲೆಲ್ಲಾ ಅಮಾವಾಸ್ಯೆಯ ರಾತ್ರಿಗಳಲ್ಲಿ ಮುನಿಸಂಚಾರವಿರುತ್ತದೆ. ಅದರ ದೃಷ್ಟಿಗೆ ನರಮನುಷ್ಯರು ಬೀಳಬಾರದು' ಇಷ್ಟು ಹೇಳಿ ಮಠದವರೆಗೂ ಬಂದು ನನ್ನನ್ನು ಬಿಟ್ಟು ಬರುವು ದಾಗಿಯೂ ಬೇಕಾದರೆ ಅಂಥ ಪೆನ್ನನ್ನು ತಾನೇ ನನಗೆ ಕೊಡಿಸುವುದಾಗಿಯೂ ತಿಳಿಸಿದ. ಆಗ್ಗೆ ಆ ಪೆನ್ನಿನ ಬೆಲೆ ಸುಮಾರು 20 ರೂಗಳಿರಬಹುದೆಂದು ಕಾಣುತ್ತದೆ. ಕಷ್ಟ ಪಟ್ಟು ದುಡಿದುಣ್ಣುತ್ತಿರುವ ತಟ್ಟೆಗೆ ಕೈಹಾಕುವುದೆ? ಅದಕ್ಕೆ ನಾನೊಪ್ಪದೇ ಭಯವೇನೂ ಇಲ್ಲವೆಂದು ವಾದಿಸಿ ವಾಪಸ್ ಹೊರಟೆನಾದರೂ ಮನದಲ್ಲಿ ಮುನಿಸಂಚಾರದ ಭೀತಿ ಯನ್ನು ನಾರಾಣಪ್ಪ ಬಿತ್ತಿದ್ದು ಸರಿಯೆನಿಸಲಿಲ್ಲ. ಆದರೂ ಮೊಂಡು ಧೈರ್ಯದಿಂದ ಜೊತೆಗೆ ಶ್ರೀ ಶ್ರೀಗಳವರ ಅಭಯವಿರುತ್ತದೆಂದು ಭಾವಿಸಿ ಹೊರಟು ಬಂದೆನು. ಪೆನ್ನನ್ನು ಪಡೆಯುವ ತೀವ್ರ ಹಂಬಲದಿಂದ ಎಲ್ಲಿಲ್ಲದ ಧೈರ್ಯ ಬಂದಿತಾದರೂ ಹಳೆಯ ಮಠದ ಹಿಂಬದಿಯ ಮರದಲ್ಲಿ ಕುಳಿತು ಕೂಗಿದ ನಿಶಾಚರಿ ಗೂಗೆಯ ಧ್ವನಿಯನ್ನು ಹಠಾತ್ ಕೇಳಿದ ನನ್ನೆದೆ ತುಸು ಝಲ್ಲೆಂದಿತು. ಮೈಕೂದಲು ನಿಮಿರಿ ನಿಂತವು. ದಾಪುಗಾಲು ಹಾಕುತ್ತಾ ಅಲ್ಲಿನ ಬಾವಿಕಟ್ಟೆಯ ಮರೆಯಲ್ಲಿ ಅವಿತುಕೊಂಡಿದ್ದ ಗೆಳೆಯರ ಬಳಿಗೆ ಬಂದು ಸೇರಿದಾಗ ಮನಸ್ಸು ಹಗುರಾಯಿತು. ಮಾತಿನಂತೆ ಪೆನ್ನು ನನ್ನ ಕೈವಶವೇನೋ ಆಯಿತು. ಆದರೆ ರಾತ್ರಿ ನಿದ್ದೆಯಲ್ಲಿ ಕಂಡ ಕನಸಿನ 'ಮುನಿ' ಸಂಚಾರ ನನ್ನನ್ನು ಮೆಟ್ಟುಬೀಳಿಸಿ ಚಿಟ್ಟನೆ ಚೀರು ವಂತೆ ಮಾಡಿ ಸಣ್ಣದಾಗಿ ಜ್ವರ ಬರುವಂತೆ ಮಾಡಿತ್ತು.

ಬೆಳಗಾದ ಮೇಲೆ ಕೊಠಡಿಯ ಮೇಲ್ವಿಚಾರಕರೂ ನನ್ನ ಬಂಧುಗಳೂ ಆಗಿದ್ದ ಶ್ರೀ ಎಸ್.ಪಿ. ಶಿವಶಂಕರ್ ರವರು ನನ್ನನ್ನು ಶ್ರೀ ಶ್ರೀಗಳವರ ಬಳಿ ಕರೆದೊಯ್ದು ನಡೆದದ್ದೆಲ್ಲಾ ವಿವರಿಸಿ ನನಗೊಂದು ಭೀತಿ ನಿವಾರಕ ಯಂತ್ರ ಹಾಗೂ ಕೊರಳಿಗೆ ದೃಷ್ಟಿದಾರವನ್ನೂ ಕಟ್ಟಿಸಿ ಕೊಂಡು ಬಂದ ಮೇಲೆ ಜ್ವರ ನಾಪತ್ತೆಯಾದದ್ದು ನನಗೆ ಇಂದಿಗೂ ವಿಸ್ಮಯಕಾರಿ ಘಟನೆಯಾಗಿಯೇ ಉಳಿದಿದೆ. ಪಂಥ ಹೂಡಿದ್ದ ಗೆಳೆಯನಿಗೆ ಶ್ರೀ ಶ್ರೀಗಳವರಿಂದ ಮೋಕ್ಷವೂ ಆಯಿತೆಂಬುದು ಬೇರೆ ವಿಚಾರವೆನ್ನಿ.

*



# ನಾಗರಾಜನ ನಾಗಪಂಚಮಿ

-ಹುಲಿಕಲ್ ನಾಗರಾಜ
ನಂ. ೧೦೪, ಹಳೇ ತಿಪ್ಪಸಂದ್ರ,
ಎಚ್.ಎ.ಎಲ್., ೨ನೇ ಹಂತ, ಬೆಂಗಳೂರು.

ನಮ್ಮ ದೇಶ ಹಬ್ಬಗಳ ದೇಶ ಎನ್ನಬಹುದು. ಪ್ರಾಯಶಃ ಜಗತ್ತಿನಲ್ಲಿ ಯಾರೂ ಆಚರಿಸದಷ್ಟು ಹಬ್ಬಗಳನ್ನು ಭಾರತೀಯರು ಆಚರಿಸುತ್ತಾರೆ. ವಿಭಿನ್ನ ಧರ್ಮೀಯರು, ಜಾತಿಯವರು ಇಲ್ಲಿ ನೆಲೆಗೊಂಡಿರುವುದರಿಂದ ಹಬ್ಬಗಳ ಸಂಖ್ಯೆ ಹೆಚ್ಚೇ ಎನಿಸಬಹುದು. ಹಬ್ಬ-ಹರಿದಿನಗಳು ಭಕ್ತಿ, ಧರ್ಮ, ಸಂಸ್ಕೃತಿಯನ್ನು ವರ್ಧಿಸುತ್ತವೆ. ಇವುಗಳ ಆಚರಣೆ ಪವಿತ್ರವಾಗಿರುವುದಲ್ಲದೆ ಇಹದ ಬದುಕಿಗೂ ಪರದ ಚಿಂತನೆಗೂ ದಾರಿದೀಪಗಳಾಗಿವೆ. ಅಂತೆಯೇ ಹಬ್ಬಗಳ ಆಚರಣೆ ವಿಶಿಷ್ಟ, ಸಡಗರ, ಮಹತ್ವಪೂರ್ಣದ್ದಾಗಿರುತ್ತದೆ.

ಪ್ರಾಚೀನ ಕಾಲದಿಂದಲೂ ಹಬ್ಬಗಳನ್ನು ಎಲ್ಲ ದೇಶದ, ಎಲ್ಲ ಧರ್ಮೀಯರು ವಿವಿಧ ಬಗೆಗಳಲ್ಲಿ ಆಚರಿಸುತ್ತಾ ಬಂದಿದ್ದಾರೆ. ಅವು ಕಾಲಮಾನಕ್ಕೆ ತಕ್ಕಂತೆ ಬದಲಾವಣೆಗೊಳ್ಳುತ್ತಾ ಬಂದಿವೆ. ಮನುಷ್ಯ ಪ್ರಕೃತಿಯ ಕೂಸು. ಪ್ರಕೃತಿಯ ಅದ್ಭುತ ಶಕ್ತಿಯನ್ನು ಅವನು ಕಂಡಿಕೊಂಡಿದ್ದಾನೆ. ತನ್ನ ಅಭಿವೃದ್ಧಿಗಾಗಿ ಜೊತೆಗೆ ರಕ್ಷಣೆಗಾಗಿ ಭಯ, ಭಕ್ತಿಯಿಂದ ಅದನ್ನು ಆಚರಿಸಿದ್ದಾನೆ. ಕಾಲ ಕಳೆದಂತೆ ಮಾನವನ ಬೌದ್ಧಿಕ ವಿಕಸನದಿಂದಾಗಿ ಚಿತ್ರ ಹಾಗೂ ಬಣ್ಣಗಳನ್ನು ಕಂಡು ಹಿಡಿದ ಮೇಲೆ ಸೃಷ್ಟಿಕರ್ತನು ತನಗೆ ತೋಚಿದಂತೆ ಸೃಷ್ಟಿಸಿ ಬಣ್ಣ ತುಂಬಿದ್ದಾನೆ. ಜೊತೆಗೆ ವೇದ-ವೇದಾಂತಗಳು, ಕಾವ್ಯ-ಪುರಾಣಾದಿಗಳು ಸುಂದರ ಸಾಮರಸ್ಯದೊಂದಿಗೆ ಜನ್ಮ ತಾಳಿದವೆಂದು ತಿಳಿದುಬಂದಿದೆ.

ನಮ್ಮ ಪೂರ್ವಿಕರು ಹಾಗೂ ಋಷಿ ಮುನಿಗಳು ನಮ್ಮಲ್ಲಿ ಆಚರಿಸುವ ಪ್ರತಿಯೊಂದು ಹಬ್ಬಕ್ಕೂ ಖಗೋಳಿಕ ನಿತ್ಯ ಸತ್ಯಗಳ ಪ್ರೇರಕಾಂಶಗಳನ್ನು ಹೊಂದಾಣಿಕೆ ಮಾಡಿರುವುದು ವಿಶೇಷ. ಹಿಂದೂ ಪಂಚಾಂಗದ ಪ್ರಕಾರ ಅವರು ಸೂರ್ಯ-ಚಂದ್ರರ ಚಲನೆಯನ್ನು ಕೇಂದ್ರವಾಗಿಟ್ಟುಕೊಂಡು ವಿಶಿಷ್ಟ ತಿಥಿ, ನಕ್ಷತ್ರಗಳನ್ನು ಗುರುತಿಸಿದ್ದಾರೆ. ಇಂಥಾ ವಿಶೇಷ ದಿನಗಳೇ ಹಬ್ಬ-ಹರಿದಿನಗಳು.

ಹಬ್ಬವೆಂದರೆ ಸಂತೋಷ ಹಾಗೂ ಉತ್ಸಾಹದ ಸಮಾರಂಭ ಮನುಷ್ಯನ ಮೇಲಿರುವ ದೇವಋಣ, ಪಿತೃಋಣ, ಋಷಿ ಋಣಗಳನ್ನು ತೀರಿಸುವ ವಿಧಾನಗಳೇ ಹಬ್ಬಗಳು. ಸಂಸ್ಕೃತದ ಪರ್ವ ಎಂಬ ಶಬ್ದದಿಂದ ಹಬ್ಬ ಎಂಬ ಪದ ಉತ್ಪತ್ತಿಯಾಗಿದೆ. ಹಬ್ಬಗಳು ನಮ್ಮ ಸೌಖ್ಯಕ್ಕಾಗಿ, ಸೌಂದರ್ಯಕ್ಕಾಗಿ, ಮನೋರಂಜನೆಗಾಗಿ, ಹೊಸ ಹಾದಿ ಕಂಡುಕೊಳ್ಳಲು, ಸಾಧನೆಯನ್ನು ಸಿದ್ಧಿಸಲು, ಸನ್ಮಾರ್ಗಕ್ಕೆ ತೆರಳಲು, ಆತ್ಮೀಯರನ್ನು ಕೂಡಿಕೊಳ್ಳುವದರ ಜೊತೆಗೆ ಸಂಘಟಣೆಗಾಗಿ ಆಚರಿಸುತ್ತೇವೆ. ರಾಷ್ಟ್ರೀಯ, ಧಾರ್ಮಿಕ, ಐತಿಹಾಸಿಕ, ಸ್ಥಳೀಯ, ಸಾಮೂಹಿಕ, ವೈಯಕ್ತಿಕ ಜನಾಂಗಿಕ ಹಬ್ಬಗಳನ್ನು ಎಲ್ಲೆಡೆ ಕಾಣಬಹುದಾಗಿದೆ.

ಭಾರತೀಯ ಸಂಸ್ಕೃತಿಯಲ್ಲಿ ಹಾಗೂ ವಿಶ್ವದ ಅನೇಕ ಪ್ರಾಚೀನ ಸಂಸ್ಕೃತಿಗಳಲ್ಲಿ ಸರ್ಪಗಳ ಕುರಿತು ಕಥೆ-ವ್ಯಾಖ್ಯಾನಗಳಿವೆ. ನಾವು ದೇವರನ್ನು ಸರ್ವ ಭೂತಾತ್ಮನೆಂದು ಹಿಂದಿನಿಂದಲೂ ತಿಳಿದಿದ್ದೇವೆ. ಹಾಗಾಗಿ ಕೆಲವು ಪ್ರಾಣಿ-ಪಕ್ಷಿ-ಮರ-ನದಿಗಳನ್ನು ಪ್ರಕೃತಿಯ ದಿವ್ಯಶಕ್ತಿಗಳ ಸಂಕೇತವಾಗಿ ಮಾನ್ಯ ಮಾಡಿದ್ದೇವೆ. ಇನ್ನು ವಿಶೇಷವಾಗಿ ಆನೆಯ ಸೊಂಡಲಿನ ಗಣಪ, ಕುದುರೆ ಮುಖದ ಹಯಗ್ರೀವ, ವರಾಹ ಮುಖದ ವರಾಹಾವತಾರ ಮುಂತಾದ ದೇವಾತಾಮೂರ್ತಿಗಳು ಹಾಗೂ ಶೇಷ, ಆನೆ. ಮೀನು, ಸಿಂಹ, ಇಲಿ, ನಂದಿ ಮೊದಲಾದ ಪ್ರಾಣಿಗಳು ನವಿಲು, ಹಂಸ, ಗರುಡ ಮೊದಲಾದ ಪಕ್ಷಿಗಳು ದೇವತಾ ಸಾನಿಧ್ಯದಲ್ಲಿ ಅವಕಾಶ ಪಡೆದಿವೆ.

ಪ್ರಾಣಿ ಪಕ್ಷಿಗಳಲ್ಲಿ ಇತರ ದೇಶದವರೂ ಕೂಡಾ ಪೂಜನೀಯ ಭಾವನೆ ಹೊಂದಿರುವುದು ಕಾಣಬಹುದು. ಆಮೆಗಳು ಈಜಿಪ್ಟ್‌ನಲ್ಲಿ ಪವಿತ್ರ ಸ್ಥಾನ ಪಡೆದಿದೆ. ರೆಕ್ಕೆಗಳುಳ್ಳ ಸರ್ಪಗಳು ಚೀನಾದಲ್ಲಿ ಸಮೃದ್ಧಿಯ ಸಂಕೇತಗಳು, ಮೀನು ಜಪಾನಿನಲ್ಲಿ ಪವಿತ್ರತೆಯ ಮತ್ತು ವೃದ್ಧಿಯ ಸಂಕೇತ. ಈಜಿಪ್ಟ್‌ನಲ್ಲಿ ಹಾವುಗಳು ಅಮೃತತ್ವದ ಸಂಕೇತ. ಜಪಾನ್ ಮತ್ತು ಚೀನಾದಲ್ಲಿ ಸರ್ಪಪೂಜಾ ಪದ್ಧತಿ ಬಹು ಹಿಂದಿನಿಂದಲೂ ಇದೆ.

ನಮ್ಮ ದೇಶದಲ್ಲಿ ಆದಿಕಾಲದಿಂದಲೇ ನಾಗಪೂಜೆ ನಡೆದು ಬರುತ್ತಿದೆ. ಪುರಾಣ, ಕಾವ್ಯ, ಮಹಾಕಾವ್ಯ ಮತ್ತು ಜನಪದಗಳಲ್ಲಿ ನಾಗ-ಗರುಡರಿಗೆ ಸಂಬಂಧಿಸಿದ ಹಲವಾರು ಉಲ್ಲೇಖಗಳಿವೆ. ಋಗ್ವೇದದ ಪ್ರಧಾನ ದೇವತೆ ಸರ್ಪ ಎನ್ನಲಾಗಿದೆ. ಹರಪ್ಪ ಸಂಸ್ಕೃತಿಯಲ್ಲೂ ನಾಗಗಳ ಉಲ್ಲೇಖವಿದೆ. ಜೈನ, ಶೈವ, ವೈಷ್ಣವ, ಸೌರಗಣಪತ್ಯ, ಶಾಕ್ತ ಇತ್ಯಾದಿ ಮತಗಳಲ್ಲಿಯೂ ನಾಗ-ಗರುಡರಿಗೆ ಪ್ರಾಧಾನ್ಯವಿದೆ. ಪಾರ್ಶ್ವನಾಥ ತೀರ್ಥಂಕರನ ಶಿರೋಭಾಗದಲ್ಲಿ ನಾಗನ ಹೆಡೆಯ ಲಾಂಛನವಿದೆ. ನಾಗನು ವಿಷ್ಣುವಿಗೆ ತಲ್ಪ, ಶಿವನಿಗೆ ಕಂಠಾಭರಣ. ಗಣಪತಿ ಉದರಬಂಧ, ಸುಬ್ರಹ್ಮಣ್ಯನ ಅನನ್ಯ ಸ್ವರೂಪ. ಭೂಭಾರವನ್ನೇ ಹೊತ್ತಿರುವ ಅಸಾಧಾರಣ ಶಕ್ತಿಶಾಲಿಯಾದ ಆದಿಶೇಷ ರೂಪದಲ್ಲೂ ಇದ್ದಾನೆ. ಯೋಗ ಸಾಧನೆಯಲ್ಲಿ ಕುಂಡಲಿನೀ ಶಕ್ತಿನಾಗ, ಈ ನಾಗಾರಾಧನೆಯಿಂದ ಗೋವು, ಧನ, ಧಾನ್ಯ, ಆಯುಷ್ಯ, ಸಂತಾನ ಸಮೃದ್ಧಿಯಾಗುವುದೆಂಬ ಬಲವಾದ ನಂಬಿಕೆಯಿದೆ.

ಶಿಕಾರಿಪುರ ಶಾಸನ ಪ್ರಕಾರ ಭಾರತದ ಪಡುವಣ ಸೀಮೆಯಾಗಿರುವ ಗೋಕರ್ಣದಿಂದ ಕನ್ಯಾಕುಮಾರಿದವರೆಗಿನ ಪರುಶುರಾಮ ಕ್ಷೇತ್ರಕ್ಕೆ ಪ್ರಾಚೀನ ಕಾಲದಲ್ಲಿ ನಾಗಖಂಡ ಎಂದು ಹೆಸರಿತ್ತು. ನಮ್ಮ ಇತಿಹಾಸದಲ್ಲಿ ಅನೇಕ ನಾಗವಂಶಗಳಿದ್ದವು ಎಂದು ತಿಳಿದು ಬರುತ್ತದೆ. ಇತ್ತೀಚೆಗೆ ನಾಗಾ ಜನಾಂಗದ ಒಂದು ಪ್ರತ್ಯೇಕ ಪ್ರಾಂತ್ಯವೇ ಏರ್ಪಟ್ಟಿದೆ. ನಾಗವಂಶದವರನ್ನು ಕೇರಳ, ಅಸ್ಸಾಂ, ನಾಗಾಲ್ಯಾಂಡಗಳಲ್ಲಿ ಹೆಚ್ಚಾಗಿ ಕಾಣಬಹುದಾಗಿದೆ. ಜನಮೇಜಯ ಮಹಾರಾಜನು ತಾನು ಮಾಡುತ್ತಿದ್ದ ಸರ್ಪಯಜ್ಞವನ್ನು ನಿಲ್ಲಿಸಿ ಮಹಾಭಾರತವನ್ನು ಕೇಳಲು ಪ್ರಾರಂಭಿಸಿದುದು ಶ್ರಾವಣ ಶುದ್ಧ ಪಂಚಮಿಯ ದಿನ. ನಾಗ-ಗರುಡರ ಮತ್ಸರ 'ಶಾಪ' ನಿವಾರಣೆ, ಕ್ಷೀರಸ್ನಾನ ಮೊದಲಾದ ಸಂಗತಿಗಳನ್ನೊಳಗೊಂಡ ಕದ್ರು-ವಿನತೆಯರ ಕಥೆ ಪುರಾಣಗಳಲ್ಲಿ ಪ್ರಸಿದ್ಧವಾಗಿದೆ.

ಭಾರತದಲ್ಲಿ ನಾಗರಹಾವನ್ನು ಪೂಜನೀಯವೆಂದು ಪರಿಗಣಿಸಲಾಗಿದೆ. ನಾಗಾರಾಧನೆಯ ವ್ಯಾಪಕವಾದ ಒಂದು ಹಬ್ಬವೇ ನಾಗರಪಂಚಮಿ. ಇದು ಶ್ರಾವಣ ಮಾಸದ ಶುದ್ಧ ಪಂಚಮಿಯಂದು ಆಚರಿಸುವಂಥದು. ಅದರ ಹಿಂದಿನ ದಿನ ನಾಗರ ಚೌತಿ ಎಂದು ಆಚರಿಸುವ ಕ್ರಮವಿದೆ. ಶ್ರಾವಣ ಹಾಗೂ ಭಾದ್ರಪದ ಮತ್ತು ಆಶ್ವೀಜ ಶುದ್ಧ ಪಂಚಮಿಗಳಲ್ಲಿ ನಾಗನನ್ನು ಪೂಜಿಸಿದರೆ ಸರ್ಪದೋಷ ನಿವಾರಣೆ ಆಗುತ್ತದೆಂದು ಹೇಳುತ್ತಾರೆ. ನಾಗರಹಾವನ್ನು ಫಲವಂತಿಕೆಯ ಪ್ರತೀಕವೆಂದು ಬಗೆಯಲಾಗಿದೆ. ಮಕ್ಕಳಾಗದವರು ನಾಗರಕಲ್ಲನ್ನು ಪ್ರತಿಷ್ಠಾಪಿಸಿ ಪೂಜಿಸಿದರೆ ಮಕ್ಕಳಾಗುವುದೆಂಬ ಬಲವಾದ ನಂಬಿಕೆಯುಂಟು.

ಶ್ರಾವಣ ಪಂಚಮಿಯಂದು ಬರುವ ಈ ಹಬ್ಬ ದ್ರಾವಿಡರಿಗೆ ವಿಶೇಷವಾದುದಾಗಿದೆ. ಹಾಗಾಗಿ ಇವರ ಆಡಂಬರವು ದಕ್ಷಿಣಭಾರತದಲ್ಲಿ ಹೆಚ್ಚು. ಈ ಸಮಯದಲ್ಲಿ ಸಾಮಾನ್ಯವಾಗಿ ಮಳೆಯು ಹೆಚ್ಚಾಗಿ ಬರುತ್ತಿರುತ್ತದೆ. ಮಳೆ ನೀರು ಹಾವಿನ ಹುತ್ತ-ಬಿಲಗಳಲ್ಲಿ ತುಂಬುವುದರಿಂದ ಹಾವುಗಳು ಭೂಮಿಯ ಮೇಲಕ್ಕೆ ಬರುತ್ತವೆ. ಇಲ್ಲವೆ ಈ ಸಮಯದಲ್ಲಿ ಎಲ್ಲೆಲ್ಲೂ ಹಸಿರು ಬೆಳೆದು ನಿಂತಿರುತ್ತದೆ. ಈ ಕಾಲದಲ್ಲೇ ಹಾವುಗಳ ಕಾಟವೂ ಹೆಚ್ಚು. ಆಪತ್ಕಾರಿ ವಿಪತ್ತುಗಳ ಸಾಕ್ಷಾದ್ರೂಪಗಳೇ ಹಾವುಗಳು. ಆದುದರಿಂದ ದೇವರೇ ಸರ್ಪಭೀತಿಯಿಂದ ಪಾರು ಮಾಡು. ನಾಗನೇ ತೊಂದರೆ ಕೊಡಬೇಡ. ನಿನ್ನನ್ನು ಇಗೋ ತೃಪ್ತಿ ಪಡಿಸುತ್ತೇವೆ ಎಂಬ ಭಾವನೆಯಿಂದ ನಾಗಾರಾಧನೆ ರೂಢಿಗೆ ಬಂದಿರಬೇಕು. ನಾಗಗಳಿದ್ದ ಹೊಲದಲ್ಲಿ ಇತರ ಕೀಟಗಳಿಂದ, ಕಳ್ಳರಿಂದ ತೊಂದರೆ ಬರುವುದಿಲ್ಲ. ಈ ಕಾರಣಗಳಿಂದಲೂ ನಾಗ ಪೂಜೆಗೆ ಔಚಿತ್ಯವಿದೆ.

ಹಬ್ಬಕ್ಕೆ ಹೆಣ್ಣುಮಕ್ಕಳು ತವರು ಮನೆಗೆ ಬರುವುದು ವಾಡಿಕೆ. ಹೆಣ್ಣು ಮಕ್ಕಳ ನಾಗರ ಪಂಚಮಿ ಬಂತೆಂದರೆ ತವರಿಗೆ ಹೋಗಲು ತವಕ ಪಡುತ್ತಾರೆ.

ಪಂಚಮಿ ಹಬ್ಬ ಉಳದಾವ ದಿನನಾಕ
ಅಣ್ಣ ಬರಲಿಲ್ಲ ಯಾಕಾ ಕರೆಯಾಕ

ನನ್ನನ್ನು ಕರೆಯಲಿ ಯಾಕೆ ಇನ್ನು ಬಂದಿಲ್ಲ? ನನ್ನನ್ನು ಮರೆತರೆ? ಎಂದು ಚಡಪಡಿಸುತ್ತಿರುತ್ತಾಳೆ. ಯಾರಾದರೂ ಕರೆಯಲು ಬಂದಾಗ ಆಕೆ ಉಲ್ಲಾಸ ಹೇಳತೀರದು. ಈ ರೀತಿ ಹೆಣ್ಣಿನ ಭಾವನೆಗಳನ್ನು ನಮ್ಮ ಜನಪದ ಗೀತೆಗಳು ಸುಂದರವಾಗಿ ವರ್ಣಿಸಿವೆ.

ಈ ಹಬ್ಬ ಹೆಣ್ಣು ಮಕ್ಕಳಿಗಾಗಿ ಇದೆ ಎನ್ನಬಹುದು. ಅವರಿಗೆ ಇದು ಮಾಂಗಲ್ಯ-ಪುತ್ರ ಸಂಪತ್ತದವೆಂದು ಭಾವಿಸಲಾಗಿದೆ. ಈ ಹಬ್ಬದಂದು ಬೆಳಿಗ್ಗೆ ಎದ್ದು, ಸ್ನಾನ ಮಾಡಿ, ಮಡಿಯುಟ್ಟು, ನಾಗನನ್ನು ತಂಪು ಮಾಡಲು ನಾಗರಕಟ್ಟೆ, ನಾಗರಹುತ್ತ ಇರುವಲ್ಲಿಗೆ ಹೋಗಿ ಎಳನೀರು

ಹಾಲು, ಅರಿಶಿನದ ನೀರಿನಿಂದ ಅಭಿಷೇಕ ಮಾಡುತ್ತಾರೆ. ಸಾಮಾನ್ಯವಾಗಿ ಅಶ್ವತ್ಥಮರದ ಬುಡದಲ್ಲಿ ಅಗ್ನಿಯ ಪ್ರತಿನಿಧಿಯಾಗಿರುವ ನಾಗನ ಪ್ರತಿಷ್ಠೆ ಮಾಡಿ ನಾಗರಕಟ್ಟೆಗಳನ್ನು ನಿರ್ಮಿಸುತ್ತಾರೆ. ಪರಿಮಳಯುಕ್ತವಾದ ಹಿಂಗಾರದ ಹೂವು, ಜನಿವಾರ, ಪಂಚಾಮೃತ, ಎಳನೀರು, ಕರ್ಪೂರ, ತುಳಸೀದಳ, ಹಣ್ಣು ಕಾಯಿಗಳಿಂದ ಕಲ್ಲನಾಗನಿಗೆ, ಮಣ್ಣಿನ ನಾಗನಿಗೆ ಅಥವಾ ಹುತ್ತಕ್ಕೆ ಪೂಜೆ, ನೈವೇದ್ಯ, ಪ್ರಾರ್ಥನೆಗಳನ್ನು ಸಲ್ಲಿಸುತ್ತಾರೆ. ಅಳ್ಳಿಟ್ಟು ತಂಬಿಟ್ಟು, ಉಂಡೆ ಉಸಳಿಗಳನ್ನು ನೈವೇದ್ಯ ಮಾಡಿ ಒಬ್ಬೊಬ್ಬರಾಗಿ ಹಾಲೆರೆದು ವಂದಿಸುತ್ತಾರೆ. ರಂಗೋಲಿಯಲ್ಲಿ ನಾಗನನ್ನು ಚಿತ್ರಿಸಿ, ಹುತ್ತದ ಮಣ್ಣು, ಗೋಧಿ ಹಿಟ್ಟನ್ನು ಕಲಸಿ ಹಾವಿನ ಆಕೃತಿ ರಚಿಸಿ ತಟ್ಟೆಯಲ್ಲಿಟ್ಟು ಅದನ್ನು ರಂಗೋಲಿಯ ನಾಗನ ಮೇಲಿಟ್ಟು ಪೂಜಿಸುವ ವಾಡಿಕೆಯೂ ಇದೆ. ನಾಗಪೂಜೆ ನಂತರ ಉಪಾಹಾರ ಅಥವಾ ಊಟ ಮಾಡಿ ಉಯ್ಯಾಲೆಯಾಡಲು ಹೊರಡುತ್ತಾರೆ.

ನಾಗರಪಂಚಮಿ ಕುರಿತು ನಮ್ಮಲ್ಲಿ ಹಲವಾರು ಜಾನಪದ ಗೀತೆಗಳಿವೆ. ಈ ಹಬ್ಬದ ಮಹತ್ವವನ್ನು ಅವುಗಳಲ್ಲಿ ಕಾಣಬಹುದು. ಗಂಡನ ಮನೆಯಲ್ಲಿ ಅನುಭವಿಸಿದ ಕಷ್ಟಗಳ ಭಾರವನ್ನು ತವರು ಮನೆಯಲ್ಲಿ ಜೋಕಾಲಿಯಾಡಿ ಹಗುರ ಮಾಡಿಕೊಳ್ಳುವ ಭಾವವನ್ನು ಈ ಕೆಳಗಿನ ಹಾಡಿನ ನುಡಿಗಳಲ್ಲಿ ಕಾಣಬಹುದು.

*ನಾಗರಪಂಚಮಿ ನಾಡ ಹೆಣ್ಣಿಗೆ ಹಬ್ಬ*
*ನಾಗಪ್ಪಗ್ಹಾಲ ಎರಿಯೋಣ–ನನ್ನೆಣತಿ*
*ನಾಗರ ಹೆಡಿಹಾಂಗ ಆಡೋಣ*

ನಾಗಾರಾಧನೆಯ ಸ್ವರೂಪವನ್ನು ತಿಳಿಸುವುದರೊಂದಿಗೆ, ಜನಜೀವನದ ಚಿತ್ರಣವನ್ನು ಇಂತಹ ಜನಪದ ಗೀತೆಗಳು ಕಣ್ಣು ಮುಂದೆ ತೆರೆದಿಡುತ್ತವೆ.

ಮಹಾರಾಷ್ಟ್ರದ ಸಾಂಗ್ಲಿ ಜಿಲ್ಲೆಯ ಬತ್ತೀಸರಾಳ್ ಗ್ರಾಮದಲ್ಲಿ ನಾಗಪಂಚಮಿ ದಿನ ಜೀವಂತ ನಾಗರ ಹಾವನ್ನು ಪೂಜಿಸುವ ಪದ್ಧತಿ ಇದೆ. ಇದು ಸುಮಾರು ೫೦೦ ವರ್ಷಗಳಿಂದಲೂ ನಡೆದು ಬರುತ್ತಿದೆ. ಆ ದಿನ ಎತ್ತಿನ ಗಾಡಿಯನ್ನು ಶೃಂಗರಿಸಿ, ಅದರ ಮೇಲೆ ಹೆಡೆ ಎತ್ತಿದ ನಾಗಗಳನ್ನು ಮಡಕೆಗಳಲ್ಲಿಟ್ಟು ಹಾಲೆರೆದು ಪೂಜೆ ಸಲ್ಲಿಸಿ ಊರಲ್ಲೆಲ್ಲಾ ಸಂಭ್ರಮದಿಂದ ಮೆರವಣಿಗೆ ಮಾಡುತ್ತಾರೆ.

ಇಷ್ಟಾರ್ಥ ಸಿದ್ಧಿಗಾಗಿ ಸರ್ಪದ ಕಲ್ಲಿಗೆ ಹಾಲೆರೆದು ಪೂಜಿಸುತ್ತಾರೆ. ನಮ್ಮಲ್ಲಿ ನಾಗನನ್ನು ಹೊಡೆದು ಕೊಲ್ಲುವವರೂ ಇದ್ದಾರೆ.

ಕಲ್ಲನಾಗರ ಕಂಡರೆ ಹಾಲನೆರೆ ಎಂಬರು,
ದಿಟದ ನಾಗರ ಕಂಡರೆ ಕೊಲ್ಲೆಂಬರಯ್ಯಾ

ಎಂಬ ಬಸವಣ್ಣನವರ ವಚನದಲ್ಲಿ ನಾಗಪೂಜೆ ಬಗ್ಗೆ ಟೀಕೆ ಇದೆ. ಹಬ್ಬದ ಹೆಸರಿನಲ್ಲಿ ಕಲ್ಲುನಾಗರಗಳಿಗೆ ಹಾಲನೆರೆದು, ದಿಟ ನಾಗರನನ್ನು ಕೊಲ್ಲುವ ಮಾನವನ ಮೌಢ್ಯವನ್ನು ನೋಡಿದಾಗ ಹಬ್ಬಗಳ ಹಿನ್ನಲೆಯ ಆಚರಣೆಗಳ ಭಕ್ತಿಭಾವದಿಂದ, ಪವಿತ್ರ ಸಂಕಲ್ಪದಿಂದ ವ್ಯಷ್ಟಿ ಸಮಷ್ಟಿಗಳ ಕಲ್ಯಾಣ ಸಾಧನೆಗಾಗಿ ಆಚರಿಸಲ್ಪಡಬೇಕು ಎಂಬುದನ್ನು ಮನಗಾಣಿಸುತ್ತದೆ.

*

## ಸೋಮೇಶ್ವರ ಶತಕ

*ಅವಿನೀತಂ ಮಗನೇ ಅಶೌಚಿ ಮುನಿಯೇ ಬೈವಾಕೆ*
*ತಾಂ ಪತ್ನಿಯೇ ।*
*ಸವಿಗೆಟ್ಟನ್ನವದೂಟವೇ ಕುಜನರೊಳ್ ಕೂಡಿರ್ಪವಂ*
*ಮಾನ್ಯನೇ ॥*
*ಬವರಕ್ಕಾಗದ ಬಂಟನೇ ಎಡರಿಗಾಂ ತಾನಾಗದಮ್*
*ನಂಟನೇ ।*
*ಶಿವನಂ ಬಿಟ್ಟವ ಶಿಷ್ಯನೇ ಹರಹರಾ*
*ಶ್ರೀ ಚೆನ್ನಸೋಮೇಶ್ವರಾ ॥*

ವಿನಯವಿಲ್ಲದ ಮಗನೂ, ಪರಿಶುದ್ಧನಲ್ಲದ ಋಷಿಯೂ, ಬೈಯುವ ಹೆಂಡತಿಯೂ, ರುಚಿಗೆಟ್ಟ ಅನ್ನದ ಊಟವೂ, ಕೆಟ್ಟವರ ಸಹವಾಸದಲ್ಲಿರುವ ದೊಡ್ಡ ಮನುಷ್ಯನೂ, ಯುದ್ಧಕ್ಕೆ ಒದಗದ ಭಟನೂ, ಕಷ್ಟಕ್ಕಾಗದ ನಂಟನೂ, ಶಿವನನ್ನು ಬಿಟ್ಟಿರುವ ಆಚಾರವಂತನೂ ಆಯಾ ಹೆಸರಿಗೆ ಅರ್ಹರಲ್ಲ.

## ವಚನ

ತನುಭಾವವನರಿದಿಪ್ಪುದು ಗುರುಭಕ್ತಿ; ಮನ ಭಾವವನರಿದಿಪ್ಪುದು ಲಿಂಗಭಕ್ತಿ, ಎರಡೂ ಭಾವವನೂ ಅರಿದಿಪ್ಪುದು ಜಂಗಮ ಭಕ್ತಿ, ಈ ಗುಣ ನಿಶ್ಚಯವಾಗಿ ನಿಂದುದು; ಸಂಗನ ಬಸವಣ್ಣ ಪ್ರಿಯ ಚಂದೇಶ್ವರ ಲಿಂಗವನರಿದುದು.

–ನುಲಿಯ ಚಂದಯ್ಯ





## 'ದಾಸೋಹ ಪ್ರಿಯ ನುಲಿಯ ಚಂದಯ್ಯ'

–ಯು.ಎಸ್. ಸಂಗನಾಳಮಠ
'ಜ್ಯೋತಿರ್ಲಿಂಗ, ಶಿವಮೊಗ್ಗ ರಸ್ತೆ, ಒಂದನೇ ಒಳತಿರುವು, ಹೊನ್ನಾಳಿ, ದಾವಣಗೆರೆ ಜಿಲ್ಲೆ.

*'ಸೋಹಂ ಎಂಬುದು ಅಂತರಂಗದ ಮದ ನೋಡಯ್ಯಾ*
*ಶಿವೋಹಂ ಎಂಬುದು ಬಹಿರಂಗ ಮದ ನೋಡಯ್ಯಾ*
*ಈ ದ್ವಂದ್ವವಳಿದು ದಾಸೋಹ ಎಂದೆನಿಸಯ್ಯಾ*
*ಕಪಿಲಸಿದ್ಧಮಲ್ಲಿಕಾರ್ಜುನಾ'*

ಶಿವಶರಣ ಸಿದ್ಧರಾಮನ ಈ ವಚನ ದಾಸೋಹದ ಮಹತ್ವವನ್ನು ತಿಳಿಸುತ್ತದೆ. ನಾನು–ನೀನು ಎಂಬ ಅಹಂಭಾವವನ್ನು ದಾಸೋಹ ಅಳಿಸುತ್ತದೆ. ಅಹಮಿಕೆ ಇಲ್ಲದ ಅರ್ಪಣೆಯೇ ದಾಸೋಹ.

ಶರಣರ ಗುರಿ ಸಮಾಜದ ಸರ್ವಾಂಗೀಣ ಪ್ರಗತಿ. ಅದಕ್ಕೆ ಕಾಯಕ–ದಾಸೋಹ ಸಾಧನಗಳಾಗಿದ್ದವು. ಇಂಥ ಹಲವಾರು ಶರಣರಲ್ಲಿ ನುಲಿಯ ಚಂದಯ್ಯನವರು ಒಬ್ಬರು. ಜಂಗಮ ತೃಪ್ತಿಯೇ ದೈವ ತೃಪ್ತಿ ಎಂದು ಬಗೆದು ದಾಸೋಹಕ್ಕೆ ತಮ್ಮನ್ನು ಅರ್ಪಿಸಿಕೊಂಡ ಮಹಾಶರಣ. ಇವನಿಗೆ 'ಕಾಯಕದ ಕಲಿ ದಾಸೋಹದ ಛಲಿ' ಎನ್ನುತ್ತಾರೆ.

ನುಲಿಯ ಚಂದಯ್ಯ ವಿಜಾಪುರದಿಂದ ೧೮ ಕಿ.ಮೀ. ದೂರದಲ್ಲಿರುವ ಶಿವಣಗಿಯಲ್ಲಿ ಜನಿಸಿದರು. ಅವರು ತಮ್ಮ ಮನೆತನದಲ್ಲಿ ನಡೆಯುವ ನುಲಿಯ ಕಾಯಕಕ್ಕೆ ಜೀವಕಳೆ ತುಂಬಿ ಅದನ್ನು ಅರ್ಥಪೂರ್ಣವಾಗಿ ನಡೆಸಲು ನಿರ್ಧರಿಸಿದ್ದರು. ದಿನಾಲು ಮೆದೆ ಹುಲ್ಲು ಕೊಯ್ದು ತಂದು ಅದನ್ನು ಸರಿಪಡಿಸಿಕೊಂಡು ಆ ಹುಲ್ಲಿನಿಂದಲೇ ನುಲಿ, ಹಗ್ಗ, ಕಣಿಗಳನ್ನು ತಕ್ಕ ಬೆಲೆಗೆ ಮಾರಿ ಬಂದ ಹಣದಿಂದ ಜಂಗಮ ದಾಸೋಹ ನಡೆಸುತ್ತಿದ್ದರು. ತಮ್ಮ ಹುಟ್ಟೂರನ್ನು ಬಿಟ್ಟು ಕಲ್ಯಾಣಕ್ಕೆ ಬಂದು ಅನುಭವ ಗೋಷ್ಠಿಯಲ್ಲಿ ಭಾಗವಹಿಸಿ ಶರಣರ ಸತ್ಸಂಗ ದಲ್ಲಿದ್ದು ಕಾಯಕ ದಾಸೋಹ ಜೀವಿ ಎಂದು ಖ್ಯಾತ ರಾಗಿದ್ದರು.

ದಾಸೋಹ ಮಾಡುವ ಭಕ್ತನಲ್ಲಿ ವಿನಯ ಶಾಂತಿ, ಇಂದ್ರಿಯ ನಿಗ್ರಹ, ನಿರ್ವಂಚನೆ, ನಿರಹಂಕಾರ ಸತ್ಯ ಕೈಂಕರ್ಯ, ಭಕ್ತಿಭಾವವಿರಬೇಕು. ಇವೆಲ್ಲ ನುಲಿಯ ಚಂದಯ್ಯನವರಲ್ಲಿದ್ದವು. ಇವರು ೪೮ ವಚನಗಳನ್ನು ರಚಿಸಿದ್ದಾರೆ. 'ಚೆನ್ನಬಸವಣ್ಣ ಪ್ರಿಯ ಚಂದೇಶ್ವರ ಲಿಂಗ' ಇವರ ಅಂಕಿತನಾಮ.

*'ಗುರುಸೇವೆಯಲ್ಲಿ ಮಾಡುವಲ್ಲಿ ಇಹದಲ್ಲಿ ಸುಖ*
*ಲಿಂಗಸೇವೆಯ ಮಾಡುವಲ್ಲಿ ಪರದಲಿ ಸುಖ*
*ಜಂಗಮಸೇವೆಯನು ಮಾಡುವಲ್ಲಿ*
*ಇಹಪರ ಎಂಬ ಉಭಯವೂ ನಾಸ್ತಿ*
*ಚಂದೇಶ್ವರಲಿಂಗದ ಹಿಂಗದ ಭಾವ'.*

'ಜಂಗಮಪೂಜೆಯೇ ಲಿಂಗಪೂಜೆ, ಜಂಗಮಭಕ್ತಿಯೇ ಲಿಂಗಭಕ್ತಿ, ಜಂಗಮತೃಪ್ತಿಯೇ ಲಿಂಗತೃಪ್ತಿ, ಜಂಗಮ ದಾಸೋಹವೇ ಪರಮಪದವೆಂದರಿದು' ಎಲ್ಲ ಕ್ರಿಯೆಗಳಿಗಿಂತ ಜಂಗಮ ನಿಷ್ಠೆ ಮುಖ್ಯವಾದದ್ದು ಎಂದು ಭಾವಿಸಿದವನು ನುಲಿಯ ಚಂದಯ್ಯ.

ನುಲಿಯ ಚಂದಯ್ಯನವರು ಹುಲ್ಲಿನಿಂದ ಹಗ್ಗವನ್ನು ಹೊಸೆದು ಮಾಡುವ ಕಾಯಕ ಹೊಂದಿದ್ದನು. ಪ್ರತಿದಿನ ಬೆಳಿಗ್ಗೆ ಪೂಜೆ ಮುಗಿಸಿಕೊಂಡು ಹೊಳೆಯ ಕಡೆ ಹೋಗಿ ಅಲ್ಲಿರುವ ಹುಲ್ಲನ್ನು ಕೊಯ್ದು ಹೊರೆ ಕಟ್ಟಿ ಮನೆಗೆ ತಂದು ಹೊಸೆದು ಹಗ್ಗ ಮಾಡಿ ಪೇಟೆಯಲ್ಲಿ ಮಾರುವುದು. ಆ ಹಣದಿಂದ ಜಂಗಮ ದಾಸೋಹ ಮಾಡುವುದು ನಿತ್ಯದ ಕಾಯಕ.

ಚಂದಯ್ಯನವರ ಕಾಯಕ ನಿಷ್ಠೆ ತೋರಲು ಶಿವ ಒಂದು ಆಟವಾಡುತ್ತಾನೆ. ಎಂದಿನಂತೆ ಚಂದಯ್ಯ ಹುಲ್ಲು ಕೊಯ್ಯುತ್ತಿರಲು ಕೊರಳಲ್ಲಿದ್ದ ಇಷ್ಟಲಿಂಗ ನೀರಿನಲ್ಲಿ ಬೀಳುವಂತೆ ಎಷ್ಟು ಹುಡುಕಿದರೂ ದೊರಕದಂತೆ ಶಿವಲೀಲೆ ಮಾಡುತ್ತಾನೆ. ಆಗ ಚಂದಯ್ಯ ಜಂಗಮ ದಾಸೋಹಕ್ಕೆ ತಡವಾಗುವುದೆಂದು ಆ ಲಿಂಗವನ್ನು ಹುಡುಕದೇ ತನ್ನ ಕಾಯಕಕ್ಕೆ ಹೊರಡುವನು. ಆಗ ಲಿಂಗ ಪುರುಷಾಕಾರ ಧರಿಸಿ 'ನಾನು ಬಂದಿಹೆನು ಬಿಟ್ಟು ಹೋಗದಿರಯ್ಯ' ಎಂದು ಹಿಂದೆ ಹಿಂದೆ ಬರುತ್ತಿರಲು ಚಂದಯ್ಯ ಆ ಲಿಂಗಾಕಾರ ವನ್ನು ಮಡಿವಾಳ ಮಾಚಯ್ಯನ ಬಳಿ ಕಳಿಸುತ್ತಾನೆ. ಕಾಯಕಕ್ಕೆ ಅಡ್ಡಿ ಮಾಡಿದ ಲಿಂಗುವನ್ನು ಮುಟ್ಟಲಾರೆ ಎಂದರು ಚಂದಯ್ಯ. ಅದಕ್ಕೆ ಮಾಚಯ್ಯನವರು 'ಅಂಗವಿರುವ ತನಕ ಲಿಂಗ ಪೂಜೆ ಇರಲೇಬೇಕು' ಎಂದಾಗ ಚಂದಯ್ಯ ಆ ಲಿಂಗಾಕಾರವನ್ನು ಮನೆಗೆ ಕರೆದು ಕೊಂಡು ಹೋದರು. ನಂತರ ಹಗ್ಗ ಹೊಸೆದು ಕಣ್ಣಿ ತಯಾರು ಮಾಡಿಕೊಂಡು ಬರಲು ಆ ಲಿಂಗಾಕಾರ ಅಥವಾ ಲಿಂಗದೇವನಿಗೆ ಕೊಡುತ್ತಾರೆ. ಬಸವಣ್ಣನ ಮನೆಗೆ ಕಣ್ಣಿಯನ್ನು ಕೊಟ್ಟಾಗ ಬಸವಣ್ಣ ಸಾವಿರ ಹೊನ್ನುಗಳನ್ನು ಕೊಡುವರು. ಅಷ್ಟೊಂದು ಹೊನ್ನನ್ನು ತಂದ ಲಿಂಗದೇವನ್ನು ಕಂಡು ಚಂದಯ್ಯ ಕುಪಿತನಾದನು. 'ನೇಮದ ಕೂಲಿಯ

ಬಿಟ್ಟು ಹೇಮದಾಸೆಗೆ ಕಮಿಸಿ ದ್ರವ್ಯವ ಹಿಡಿದರೆ ತಾ ಮಾಡುವ ಸೇವೆನಷ್ಟ' ಎಂದು ಹೇಳಿ

*'ಕಾರೆ ಕಾಯಿ ಕಾಡು ಸೊಪ್ಪಾದರೂ ಕಾಯಕದಿಂದ ಬಂದುದು ಲಿಂಗಕ್ಕರ್ಪಿತವಲ್ಲದೆ ದುರಾಶೆಯಿಂದ ಬಂದುದು ಅನರ್ಪಿತ. ಇದು ಕಾರಣ ಸತ್ಯ ಶುದ್ಧ, ಕಾಯಕದ ನಿತ್ಯ ದ್ರವ್ಯವಾದರೆ ಚಂದೇಶ್ವರ ಲಿಂಗಕ್ಕೆ ನೈವೇದ್ಯ ಸಂದಿತ್ತು'*

ಎಂದು ಲಿಂಗದೇವನನ್ನು ಮಡಿವಾಳ ಮಾಚಯ್ಯನ ಬಳಿಗೆ ಕಳಿಸಿದನು. ಅದನ್ನು ಕ್ಷಮಿಸುವಂತೆ ಮಾಚಯ್ಯ ಚಂದಯ್ಯನಿಗೆ ಹೇಳಲು 'ನಡೆನುಡಿ ಶುದ್ಧವಿಲ್ಲದವರ ಚಂದೇಶ್ವರಲಿಂಗ ಒಪ್ಪಲಾರ' ಎಂದನು.

ನಂತರ ಮಡಿವಾಳ ಮಾಚಯ್ಯ ಚಂದಯ್ಯನನ್ನು ಮತ್ತು ಲಿಂಗದೇವನನ್ನು ಅನುಭವ ಮಂಟಪಕ್ಕೆ ಕರೆತರುತ್ತಾನೆ. ಚಂದಯ್ಯ ತನ್ನ ಕಾಯಕದ ಕ್ರಮವನ್ನು ದಾಸೋಹದ ನೆಲೆಯನ್ನು ಈ ರೀತಿ ಹೇಳಿದರು.

*'ಸಂಸಾರ ಸಾಗರದ ಮಧ್ಯದೊಳಗೆ ಬೆಳೆದ*
*ಹೊಡೆಕೆಯ ಹುಲ್ಲ ಕೊಯಿತಂದು*
*ಮತ್ತ ಮಾ ಕಣ್ಣು ತೆಗೆದು ಕಣ್ಣಿಯ ಮಾಡಿ*
*ಇಹಪರವೆಂಬ ಉಭಯದ ಗಂಟನಿಕ್ಕಿ*
*ತುದಿಯಲ್ಲಿ ಮಾಟಕೂಟವೆಂಬ ಮನದ*
*ಕುಣಿಕೆಯೊಳಗೆ ಕಾಯಕವಾಯಿತ್ತು*

ಇದು ಕಾರಣ ಚಂದೇಶ್ವರಲಿಂಗವೆಂಬ ಭಾವವೆನಗಿಲ್ಲ' ಪ್ರಭುದೇವರು ಕಾಯಕನಿಷ್ಠೆ ಮೆಚ್ಚಿದರೂ ಈ ರೀತಿ ಹೇಳುತ್ತಾರೆ.

*'ಅಂಗವುಳ್ಳನ್ನಬರ ಲಿಂಗಪೂಜೆಯಬೇಕು*
*ಲಿಂಗವೆಂಬ ಮೂರ್ತಿಯುಳ್ಳನ್ನಬರ ಸಂದಿಲ್ಲದೆ ಅರ್ಪಿಸಬೇಕು*
*ಅಂಗವಳಿದ ಮತ್ತೆ ಲಿಂಗವೆಂಬ ಭಾವ ಹಿಂಗದಿರಬೇಕು*
*ಅದು ಗೋಹೇಶ್ವರಲಿಂಗದ ಇರವು ಚಂದಯ್ಯಾ'*

ಅಲ್ಲಮರ ಈ ಮಾತಿಗೆ ಚಂದಯ್ಯ ತನ್ನ ಕಾಯಕ ಜಂಗಮ ನಿಷ್ಠೆಗಳನ್ನು ಈ ರೀತಿ ವ್ಯಕ್ತಪಡಿಸುತ್ತಾನೆ. ಗುರುವಾದರೂ ಕಾಯಕದಿಂದ ಜೀವನ್ಮುಕ್ತಿ, ಲಿಂಗವಾದರೂ ಕಾಯಕ ದಿಂದಲೇ, ಶಿಲೆಯ ಕುರುಹು ಹರಿವುದು. ಜಂಗಮವಾದರೂ ಕಾಯಕದಿಂದಲೇ ತನ್ನ ವೇಷದ ಪಾಶ ಹರಿವುದು ಎಂದು ಕಾಯಕದ ನಿಷ್ಠೆಯ ಗುರು ಲಿಂಗ ಜಂಗಮಕ್ಕೆ ಬೇಕು ಎಂದಿದ್ದಾರೆ ಪ್ರಭುದೇವರು. ಇಷ್ಟಲಿಂಗ ಪೂಜಿಸದೆ ಹೇಗೆ ಜಂಗಮಸೇವೆ ಮಾಡುವಿರಿ? ಎಂದಾಗ ಚಂದಯ್ಯ

*ಜಂಗಮ ಸೇವೆಯ ಚಿತ್ತ ಶುದ್ಧವಾಗಿ ಮಾಡುವಲ್ಲಿ*
*ಗುರುಸೇವೆ ಸಂದಿತ್ತು*
*ಜಂಗಮದಾಸೋಹ ಸರ್ವಪದವಾಯಿತ್ತು*
*ಆ ಗುಣವರಿದು ಹರಿಯಾಗಿ ಬಟ್ಟ ಬಯಲ*
*ಕಾಣಬಂದಿತ್ತು'*
*ಹುಟ್ಟುವ ಹೊಂದುವ ನೆಲೆ ಇತ್ತಲೆ ಉಳಿಯಿತ್ತು*
*ಚೆನ್ನಬಸವಣ್ಣ ಪ್ರಿಯ ಚಂದೇಶ್ವರ ಲಿಂಗವ ನರಿಯಲಾಗಿ*

ಎಂದು ಜಂಗಮ ದಾಸೋಹವಿದ್ದರೆ ಲಿಂಗಪೂಜೆ ತಾನೇ ಸಲ್ಲುವುದೆಂದು ಹೇಳಿದರು.

ಆಗ ಮಡಿವಾಳ ಮಾಚಯ್ಯನವರು ಜಂಗಮದ ಸೇವೆ ಲಿಂಗರಹಿತವಾಗಿರಬೇಕೇ? ಲಿಂಗವೆಂಬುದು ಜಂಗಮದಂಗ ಆ ಲಿಂಗವಿಲ್ಲದೆ ಪ್ರಾಣವುಂಟೇ? ಎಂದಾಗ ಲಿಂಗವೆಂದರೆ ಆತ್ಮ ಅಂಗವೆಂದರೆ ಶರೀರ. ಈ ಶರೀರ ಉಳಿದಿರುವುದನ್ನು ನೋಡಿದರೆ ಆತ್ಮವಿದೆ ಎಂದು ಅರ್ಥವಲ್ಲವೇ? ಆದುದರಿಂದ ಜಂಗಮ ದಾಸೋಹ ನಡೆದಿರುತ್ತದೆ. ಇಷ್ಟಲಿಂಗದ ಅವಶ್ಯಕತೆ ಇಲ್ಲ ಎಂದರು ಚಂದಯ್ಯ.

ಪ್ರಭುದೇವರು ಚನ್ನಬಸವಣ್ಣನವರ ಕಡೆಗೆ ತಿರುಗಿದಾಗ ಚನ್ನಬಸವಣ್ಣ 'ಶ್ರೀಗುರು ಕರುಣವೇ ಲಿಂಗ. ಲಿಂಗದ ನಿಜವೇ ಜಂಗಮ. ಇದು ಬಹಿರಂಗದ ವರ್ತನೆ. ಇನ್ನು ಅಂತರಂಗದ ಸುಜ್ಞಾನವೇ ಜಂಗಮ. ಆ ಜಂಗಮದ ನಡೆವ ಸತ್‌ಕ್ರಿಯೆ ಲಿಂಗ. ಈ ಉಭಯ ಏಕತ್ವ ಸಿದ್ಧಿಯೇ ಗುರು' ಎಂದು ಹೇಳಿದಾಗ ಚಂದಯ್ಯ ಲಿಂಗ ಧರಿಸಿದರು.

ಕೊನೆಯಲ್ಲಿ ಪ್ರಭುದೇವನು 'ಆಚಾರವೇ ಲಿಂಗ ಆ ಆಚಾರದರಿವೆ ಜಂಗಮ ಆ ಅಂಗವೇ ಲಿಂಗ ಚೈತನ್ಯವೇ ಜಂಗಮ ಆ ಜಂಗಮದ ಸೇವೆಯೇ ಲಿಂಗ' ಕೊಂಬುದೇ ಜಂಗಮ ನಮ್ಮ ಗೊಹೇಶ್ವರನ ಶರಣರು ಮೆಚ್ಚುವಂತೆ ಮಡಿವಾಳನ ಕಾಯಕದಂತೆ ನಿರೂಪಿಸಿದ ಚೆನ್ನಬಸವಣ್ಣನ ಕರುಣದಲ್ಲಿ ಬದುಕಾ ಚಂದಯ್ಯ'

ಈ ಪೂರ್ಣದೃಷ್ಟಿಯ ದಾಸೋಹ ಮಾರ್ಗದಲ್ಲಿ ಬದುಕು ಎನ್ನುತ್ತಾನೆ ಪ್ರಭುದೇವ.

ನುಲಿಯ ಚಂದಯ್ಯನ ವಚನಗಳು ಚಂದೇಶ್ವರ ಲಿಂಗ ಎಂಬ ಅಂಕಿತವನ್ನು ಹೊಂದಿವೆ. ಕಲ್ಯಾಣ ಕ್ರಾಂತಿಯ ನಂತರ ಉಳುವಿಯೆ ಕಡೆಗೆ ಚೆನ್ನಬಸವಣ್ಣ ಅಕ್ಕನಾಗಮ್ಮ, ಡೋಹರ ಕಕ್ಕಯ್ಯ, ಮಡಿವಾಳ ಮಾಚಿದೇವರೊಂದಿಗೆ ಹೊರಡುವರು'. ಅಲ್ಲಿ ಶರಣರು ಐಕ್ಯರಾಗಲು ಅಕ್ಕನಾಗಮ್ಮ ನವರು ದುಃಖದಿಂದ ಹೊರಡಲು ಮಡಿವಾಳ ಮಾಚಯ್ಯ ನವರು ಚಂದಯ್ಯನವರನ್ನು ಬೆಂಗಾವಲಿಗೆ ಕಳಿಸುವರು. ಅಕ್ಕನಾಗಮ್ಮನವರು ಚಿಕ್ಕಮಗಳೂರು ಜಿಲ್ಲೆಯ ಎಣ್ಣೆಹೊಳೆ ಯಲ್ಲಿ ಲಿಂಗೈಕ್ಯರಾಗಲು ಚಂದಯ್ಯ ಮುಂದುವರಿದು ಕಲ್ಲತ್ತರಿಯಲ್ಲಿ ಲಿಂಗೈಕ್ಯರಾದರು. ಅದಕ್ಕಾಗಿ ಆ ಊರಿಗೆ 'ನುಲೆನೂರು' ಎಂದು ಕರೆಯುತ್ತಾರೆ.

❋





## ಅಮೃತ ಬಳ್ಳಿ (Tenosphora Cordifella)

–ಅಂಜನಾ ಜಿತೇಂದ್ರ ದೇಶಪಾಂಡೆ, ೧೪, 'ನಿಸ್ಸೀಮ' ದೇಸಾಯಿ ಕಾಲೋನಿ, ಕರ್ನಾಟಕ ವಿ.ವಿ. ಡಿ–ಕ್ರಾಸ್ ಹತ್ತಿರ, ಧಾರವಾಡ.

ಹೆಸರೇ ಸೂಚಿಸುವಂತೆ ಆಯುರ್ವೇದ ಶಾಸ್ತ್ರದಲ್ಲಿ ಬರುವ ಪ್ರಮುಖ ಔಷಧೀಯ ವನಸ್ಪತಿಯನ್ನು 'ಅಮೃತ ಬಳ್ಳಿ' ಎಂದು ಕರೆಯುತ್ತೇವೆ. ಈ ಬಳ್ಳಿಯ ಪ್ರತಿಯೊಂದು ಭಾಗವೂ ಸಹ 'ಅಮೃತ'ದಂತೆ ಕೆಲಸ ಮಾಡಿ ಮಾನವನ ದೇಹದ ಅಂಗಾಂಗಗಳಿಗೆ ತನ್ನ ಸಹಾಯ ಹಸ್ತವನ್ನು ನೀಡುತ್ತಿದೆ. ಸಂಸ್ಕೃತದಲ್ಲಿ ಇದನ್ನು ಅಮೃತ, ಗುಡೂಚಿ, ವಿನ್ನರುಹ ಮೊದಲಾದ ಹೆಸರುಗಳಿಂದ ಕರೆಯುತ್ತಾರೆ.

ಈ ಬಳ್ಳಿಯನ್ನು ಪ್ರತಿಯೊಬ್ಬರೂ ಮನೆಯಲ್ಲಿ ಸಹ ಬೆಳೆಸಬಹುದಾಗಿದೆ. ಪ್ರತಿದಿನ ದೇಹಕ್ಕೆ, ಮನಸ್ಸಿಗೆ 'ಅಮೃತ' ದೊರೆಯಬಹುದಾದರೆ ಇದನ್ನು ಯಾಕೆ ಬೆಳೆಸಿ ಪ್ರಯೋಜನೆ ಪಡೆಯಬಾರದು? ಇದನ್ನು ಸಾಮಾನ್ಯ ಜ್ವರದಿಂದ ಹಿಡಿದು ಭಯಂಕರ ಅರ್ಬುದ ರೋಗಕ್ಕೂ ಸಹ ಬಳಸಬಹುದಾಗಿದೆ. ರಸ, ಚೂರ್ಣ, ಕಷಾಯಗಳ ರೂಪದಲ್ಲಿ ಇದನ್ನು ಉಪ ಯೋಗಿಸುತ್ತಾರೆ. ಸತ್ವದ ರೂಪದಲ್ಲಿಯೂ ಇದನ್ನು ಬಳಸುತ್ತಾರೆ.

ಪ್ರತಿದಿನ ಇದರ ರಸವನ್ನು ೩–೪ ಚಮಚೆಯಷ್ಟು ತೆಗೆದು ಅದೇ ಪ್ರಮಾಣದ ಜೇನುತುಪ್ಪದೊಂದಿಗೆ ಬೆರೆಸಿ ಕುಡಿಯು ವುದರಿಂದ ಜಾಂಡೀಸ್(ಅರಿಶಿನ ಕಾಮಾಲೆ) ರೋಗ ಹೋಗು ತ್ತದೆ. ಅಲ್ಲದೆ ಹಸಿ ಕಾಂಡದ ತುಂಡನ್ನು ಪ್ರತಿದಿನ ಸ್ವಲ್ಪ ಸ್ವಲ್ಪ ಹಲ್ಲುಗಳಿಂದ ಜಿಗಿದು ರಸವನ್ನು ನುಂಗುತ್ತಿದ್ದರೆ ಸಿಹಿಮೂತ್ರ ರೋಗ ನಿವಾರಣೆ ಆಗುತ್ತದೆ.

ಅಮೃತ ಬಳ್ಳಿಯು ವೀರ್ಯವರ್ಧಕ ಮತ್ತು ಜ್ವರವನ್ನು ಸಹ ಕಡಿಮೆ ಮಾಡುತ್ತದೆ. ಎಷ್ಟೋ ಬಾರಿ ಅಜೀರ್ಣಕ್ಕೂ ಸಹ ಮದ್ದಾಗಿದೆ. ಏಕೆಂದರೆ ಇದರಲ್ಲಿ ಬೆರಬೆರಿನ್ ಎಂಬ ಆಲ್ಕಾಲಾಯ್ಡ್ ಅಂಶ ಇದೆ.

ಇದರ ರಸ ಸೇವನೆಯಿಂದ ಅತಿಸಾರ, ಆಮಶಂಕೆ ರೋಗಗಳು ಕಡಿಮೆಯಾಗುತ್ತವೆ ಅಲ್ಲದೆ ಇದರ ಎಲೆಗಳನ್ನು ನುಣ್ಣಗೆ ಅರೆದು ಜೇನುತುಪ್ಪದಲ್ಲಿ ಕಲಿಸಿ ಸುಟ್ಟ ಹಾಗೂ ಸಾಮಾನ್ಯ ಗಾಯಗಳ ಮೇಲೆ ಹಚ್ಚಿದರೆ ಗಾಯಗಳ ನೋವು ಕಡಿಮೆಯಾಗಿ ಬೇಗ ಮಾಯುವಲ್ಲಿ ಸಹಕಾರಿಯಾಗುತ್ತದೆ. ಮೂತ್ರರೋಗ, ಕರುಳುರೋಗ, ಹಲವಾರು ಚರ್ಮವ್ಯಾಧಿಗಳು ಇದ್ದಾಗ ಈ ಬಳ್ಳಿಯು ಪರಿಹಾರಿಕ ಸಸ್ಯವಾಗಿ ಕಂಡು ಬರುತ್ತದೆ. ಕಾಲು ನೋವು, ಕೀಲುನೋವು ಬಂದಾಗ ಅಮೃತ ಬಳ್ಳಿಯಿಂದಲೇ ತಯಾರಾದ ಗುಡೂಚ್ಯಾದಿ ತೈಲವನ್ನು ಲೇಪಿಸಿದಾಗ ಹಾಯಾಗಿ, ಹಿತವನ್ನುಂಟು ಮಾಡುತ್ತದೆ. ಇದರ ಸತ್ವದಿಂದ ವಿಷಜಂತುಗಳು, ಕಚ್ಚಿದಾಗ, ಅವುಗಳ ವಿಷವು ಇಳಿಮುಖವಾಗುತ್ತದೆ. ಬಲಿತ ಕಾಂಡವನ್ನು ಕಿತ್ತು, ಚೆನ್ನಾಗಿ ನೀರಿನಿಂದ ತೊಳೆದು, ಸಣ್ಣ ಸಣ್ಣ ಚೂರುಗಳನ್ನಾಗಿ ಮಾಡಿ ಕುಟ್ಟಿ ಬಂದ ರಸವನ್ನು ಅಷ್ಟೇ ಪ್ರಮಾಣದ ಜೇನು ತುಪ್ಪದೊಂದಿಗೆ ಪ್ರತಿದಿನ ಎರಡು ಸಾರಿ ಊಟದ ನಂತರ ಒಂದು ಟೀ ಸ್ಪೂನ್‌ನಷ್ಟು ಸೇವಿಸಿದರೆ ದೇಹದಲ್ಲಿ ರೋಗ ನಿರೋಧಕ ಶಕ್ತಿ ಹೆಚ್ಚಾಗುತ್ತದೆ.

ಇವುಗಳನ್ನೆಲ್ಲಾ ನೋಡಿದ ನಂತರ ಅಮೃತದ ಅಗಾಧ ಶಕ್ತಿಯನ್ನು ಹೊಂದಿರುವಂತಹ 'ಅಮೃತಬಳ್ಳಿ'ಯನ್ನು ಉಪ ಯೋಗಿಸುವುದು ಅತ್ಯಂತ ಸೂಕ್ತ ಎನಿಸುತ್ತದೆ. ಕೆಲವರಿಗೆ ಪ್ರತಿದಿನ ಇದರ ಸೇವನೆಯಿಂದ ದೇಹದಲ್ಲಿ ನಿಶ್ಯಕ್ತಿ ತಲೆದೋರಿ ದಂತೆಯೂ ಸಹ ಕಂಡುಬರುತ್ತದೆ.

ಆದ್ದರಿಂದ ಔಷಧೀಯ ಗುಣಗಳನ್ನು ಹೊಂದಿರುವ ಅಪಾರ ಸದ್ಗುಣಗಳನ್ನು ಹೊಂದಿರುವ ಈ ಬಳ್ಳಿಯ ಯಾವುದೇ ಭಾಗವನ್ನು ಉಪಯೋಗಿಸಬೇಕಾದರೂ ಸಹ ಪ್ರಮಾಣಬದ್ಧವಾಗಿ, ಆಯುರ್ವೇದ ವೈದ್ಯರ ಸಲಹೆ, ಸೂಚನೆ ಗಳ ಪ್ರಕಾರ ಅಲ್ಲದೆ, ನಮ್ಮ ದೈಹಿಕ ರಚನೆ, ಪ್ರಕೃತಿ ಗುಣಗಳ ಪ್ರಕಾರ ತೆಗೆದುಕೊಳ್ಳುವುದು ಅತ್ಯಂತ ಸೂಕ್ತ ಹಾಗೂ ಸಮ ಂಜಸವಾಗಿದೆ. ಯಾವುದೇ ಅಡ್ಡಪರಿಣಾಮಗಳಿಲ್ಲದಿದ್ದರೂ ಸಹ ತಜ್ಞ ವೈದ್ಯರ ಸಲಹೆ, ಭೇಟಿಯ ನಂತರವೇ ಉಪಯೋಗಿ ಸುವುದು ಪರಿಣಾಮಕಾರಿಯಾಗಿರುತ್ತದೆ.

❋



# ಮೈಸೂರು ಜಿಲ್ಲೆಯ ಶರಣ ಕ್ಷೇತ್ರಗಳು-ಸುತ್ತೂರು

-ಡಾ॥ ಕೆ.ಎಸ್. ರತ್ನಮ್ಮ
೨೮೮೪, ಕೋರ್ಟ್ ಹಿಂಭಾಗ, ಸರಸ್ವತಿಪುರಂ,
ಮೈಸೂರು.

**ಶ**ರಣ ಕ್ಷೇತ್ರಗಳಲ್ಲಿ ಸುತ್ತೂರು ಮೈಸೂರು ಜಿಲ್ಲೆಯಲ್ಲಿ ಖ್ಯಾತಿ ಪಡೆದಿದೆ. ಶೈಕ್ಷಣಿಕ, ಸಾಮಾಜಿಕ, ಸಾಂಸ್ಕೃತಿಕವಾಗಿ ವಿವಿಧ ಕ್ಷೇತ್ರಗಳಿಗೆ ಹಿಂದಿನಿಂದಲೂ ವಿಶಿಷ್ಟ ಕೊಡುಗೆ ನೀಡುತ್ತಾ ಬಂದಿದೆ. ಸಾವಿರ ವರ್ಷಗಳ ಪ್ರಾಚೀನತೆಯನ್ನು ಹೊಂದಿ ಅನೇಕ ಶಿವಾನುಭವಿಗಳು ಶರಣರು ಸಾಧನೆ ಮಾಡಿದ ಅವಿಮುಕ್ತ ಕ್ಷೇತ್ರವಾಗಿದೆ.

ಮೈಸೂರು ಜಿಲ್ಲೆಯ ನಂಜನಗೂಡು ತಾಲ್ಲೂಕಿನ ಹೊಸಕೋಟೆಯ ಪಕ್ಕದಲ್ಲಿ ಮೈಸೂರಿನಿಂದ ಸುಮಾರು ಹದಿನಾರು ಕಿ.ಮೀ. ದೂರದಲ್ಲಿದೆ. ಹತ್ತನೆಯ ಶತಮಾನದ ವೇಳೆಗೆ 'ಶ್ರೋತ್ರಿಯೂರು' ಎಂದು ಹೆಸರಾಗಿದ್ದ ಈ ಸ್ಥಳಕ್ಕೆ ತನ್ನದೇ ಆದ ಐತಿಹಾಸಿಕ ಹಿನ್ನಲೆಯಿದೆ. ಈ ಊರಿನಲ್ಲಿ ಶ್ರೀ ಶಿವರಾತ್ರೀಶ್ವರರು ಸ್ಥಾಪಿಸಿದ ಶ್ರೀಮಠ, ಕಪಿಲಾನದಿ ತೀರದಲ್ಲಿರುವ ಆದಿ ಜಗದ್ಗುರುಗಳ ಗದ್ದುಗೆ, ಗ್ರಾಮದೊಳಗಿರುವ ಶ್ರೀಮಠದ ಭಾಗವಾಗಿರುವ ಮಹದೇಶ್ವರರ ಪವಿತ್ರ ಗದ್ದುಗೆ, ಮಹದೇಶ್ವರರು ಬೀಸುತ್ತಿದ್ದರೆನ್ನಲಾದ ಬೃಹತ್ ರಾಗಿಕಲ್ಲು, ಶ್ರೀಮಠದ ಒಳಗಿರುವ ಅಪರೂಪದ ವರ್ಣಚಿತ್ರಗಳು ಲಿಂಗಪೂಜೆ ಮಾಡಿಕೊಳ್ಳುತ್ತಿದ್ದ ಗದ್ದುಗೆ, ಹೊಳೆಯುವ ಬೆಳ್ಳಿಪಲ್ಲಕ್ಕಿ, ಎದುರಿಗೆ ಶಿಲಾಶಾಸನಗಳ ಸಂಗ್ರಹ, ಮಂತ್ರ ಮಹರ್ಷಿಗಳು ಲಿಖಿಸಿದ ಕೋಟಿ ಕೋಟಿ ಷಡಕ್ಷರ ಮಂತ್ರಗಳ ಹೊತ್ತಿಗೆಗಳು ಆವರಣದಲ್ಲಿರುವ ಪುರಾತನ ಸೋಮೇಶ್ವರ ದೇವಾಲಯ, ಸಂಸ್ಕೃತ ವೇದ ಪಾಠಶಾಲೆ, ಕೃಷಿಭವನ, ದಾಸೋಹ ನಿಲಯಗಳು ಇಲ್ಲಿ ನೋಡುವಂತಹ ಸ್ಥಳ ವಿಶೇಷಗಳಾಗಿವೆ.

ಈ ಗ್ರಾಮವು ಆಗಮ, ಶ್ರುತಿ ಮೊದಲಾದವುಗಳಲ್ಲಿ ಪಾಂಡಿತ್ಯ ಪಡೆದಿದ್ದ ವಿದ್ವಾಂಸರುಗಳ ತವರಾಗಿದ್ದ ಕಾರಣ ಶ್ರೋತಿಯೂರು ಎಂಬ ಹೆಸರು ಬಂದಿರಬಹುದು. ೧೧ನೆಯ ಶತಮಾನದ ಮೊದಲ ಅರ್ಧ ಭಾಗದಲ್ಲಿ ಇಲ್ಲಿನ ಜಗದ್ಗುರು ಶ್ರೀ ಈಶಾನೇಶ್ವರ ಒಡೆಯರು ವಿಖ್ಯಾತರಾಗಿದ್ದ ಬಗ್ಗೆ ಶಾಸನೋಕ್ತ ಆಧಾರಗಳಿವೆ. ಇಂತಹ ಮಹಾತಪಸ್ವಿಗಳು ಕಾರಣಪುರುಷರು ಸುತ್ತೂರು ಶ್ರೀ ವೀರಸಿಂಹಾಸನ ಮಠದ ಗುರುಪರಂಪರೆಯಲ್ಲಿ ಇದ್ದಾರೆ. ಶ್ರೀಮಠಕ್ಕೆ ಸಾಮಾನ್ಯರು, ಸಾಮ್ರಾಟರೂ ಭಕ್ತಿಯಿಂದ ಸತ್ಪ್ರಭಾವಕ್ಕೆ ಒಳಗಾಗಿದ್ದು ಈ ಶರಣ ಪರಂಪರೆಯ ಕ್ಷೇತ್ರದಿಂದ ಮಾಡಿದ ಸಾಮಾಜಿಕ, ಆಧ್ಯಾತ್ಮಿಕ, ಶೈಕ್ಷಣಿಕ ಸೇವೆಯ ಪ್ರಭಾವದಿಂದ ಎಂಬುದು ಸುಸ್ಪಷ್ಟವಾಗಿದೆ.

ಆದಿ ಜಗದ್ಗುರು ಶ್ರೀ ಶಿವರಾತ್ರೀಶ್ವರರು ಈ ವೀರ ಸಿಂಹಾಸನ ಮಠದ ಸಂಸ್ಥಾಪನೆ ಮಾಡಿದರೆಂದು ಐತಿಹ್ಯಗಳಿಂದ ತಿಳಿದು ಬರುತ್ತದೆ. ಸಾವಿರ ವರ್ಷಗಳ ಹಿಂದೆ ಕಪಿಲಾ ನದಿ ತೀರದಲ್ಲಿ ಶಿವಯೋಗ ಮಗ್ನರಾಗಿದ್ದ ಈ ಯತಿಗಳು ಕಂಚಿಯ ರಾಜರಾಜನಿಗೂ ತಲಕಾಡಿನ ರಾಚಮಲ್ಲನಿಗೂ ನಡೆಯುತ್ತಿದ್ದ ಯುದ್ಧ ಸಂದರ್ಭದಲ್ಲಿ ಜನರ ಆತಂಕ, ಅಶಾಂತಿ ಕಂಡು ತಮ್ಮ ದಿವ್ಯ ಪ್ರಭಾವದಿಂದ ಈ ಇಬ್ಬರ ದ್ವೇಷವನ್ನು ನಿವಾರಿಸಿ ಯುದ್ಧದಿಂದ ಆಗುವ ಅನರ್ಥಗಳನ್ನು ತಿಳಿಸಿ ಶಾಂತಿ ನೆಲೆಸಲು ಉಪದೇಶ ಮಾಡಿದರು. ಈ ರಾಜರು ಸ್ನೇಹ ಸೌಹಾರ್ದಗಳ ಪ್ರಾರ್ಥನೆಯ ಮೇರೆಗೆ ಪ್ರದಕ್ಷಿಣಪುರ, ಶ್ರೋತ್ರಿಯೂರಲ್ಲಿ ಶ್ರೀ ಶಿವರಾತ್ರೀಶ್ವರ ವೀರಸಿಂಹಾಸನ ಮಠವನ್ನು ಸ್ಥಾಪಿಸಿದರು. ಈ ಭಾಗದ ಜನರಲ್ಲಿ ಧರ್ಮಜಾಗೃತಿ ಉಂಟು ಮಾಡಿ, ಶಾಂತಿಯಿಂದ ಬಾಳುವಂತೆ ಕರುಣಿಸಿದರು.

ಈ ಪೀಠದ ದ್ವಿತೀಯ ಜಗದ್ಗುರುಗಳಾದ ಶ್ರೀ ಈಶಾನೇಶ್ವರ ಒಡೆಯರು ಅದ್ವಿತೀಯ ಸೇವಾ ಕಾರ್ಯಗಳಿಂದ ಮಾಡಿದ ಸೇವೆಗೆ ಶಿಲಾಲೇಖಗಳು, ಕಾವ್ಯಗಳಲ್ಲಿ ಉಲ್ಲೇಖಗಳಿವೆ. ಕ್ರಿ.ಶ. ೧೦೩೦ನೇ ವರ್ಷದಲ್ಲಿ ಶ್ರೀಮಠಕ್ಕೆ ನಿಯೋಜಿತರಾಗಿದ್ದ ಇವರನ್ನು ಕುರಿತು ಶಾಸನ ನಂ. ೨೮ (೧೬೪)ರಲ್ಲಿ ಕಾಲ ನಿರ್ದೇಶನವಿದೆ. ಚೋಳ ಚಕ್ರವರ್ತಿ ರಾಜೇಂದ್ರ ಚೋಳನ ೩೧ನೆಯ ಪಟ್ಟಾಭಿಷೇಕ ಸಂತೋಷದ ಸಂದರ್ಭದಲ್ಲಿ ರಾಜಗುರುಗಳಾಗಿದ್ದ ಇವರಿಗೆ ನಾಗರೀಕರು ನೀಡಿದ ಸನ್ಮಾನ ಹಾಗೂ ನಂಜನಗೂಡು ಶಾಸನ ೧೬೫ ನಂಜನಗೂಡು ಶಾಸನ ೧೬೫ರಲ್ಲಿ ನಾಗರೀಕರು ನೀಡಿದ ದತ್ತಿ-ದಾನಗಳ ವಿವರಗಳಿದ್ದು, ಶ್ರೀಮಠದ ಖ್ಯಾತಿ, ಧಾರ್ಮಿಕ ಚಟುವಟಿಕೆಗಳಿಂದ ಜನಪ್ರಿಯವಾಗಿದ್ದ ಬಗ್ಗೆ ತಿಳಿಯುತ್ತದೆ.

ನಂತರ ೧೧೯೦ರಲ್ಲಿ ಶ್ರೀ ನಿಜಲಿಂಗ ಶಿವಾಚಾರ್ಯರು ಪಟ್ಟಕ್ಕೆ ಬಂದು ಶ್ರೀಮಠದ ಶ್ರೇಯೋಭಿವೃದ್ಧಿ ಕಾರ್ಯ





ಗಳಿಂದ ಸುತ್ತೂರಿಗೆ ವಿಶೇಷ ಪ್ರಾಶಸ್ತ್ಯ ದೊರೆಯಿತು. ಹೊಯ್ಸಳ ಲಕ್ಷ್ಮಯ್ಯ ದಂಡನಾಯಕನು ಸುತ್ತೂರಿನ ಮಹಾ ಮಂಡಲಾಧಿಪತಿಯಾಗಿದ್ದನೆಂದು ೧೧೬೯ರ ಶಾಸನದಿಂದ ತಿಳಿದು ಬರುತ್ತದೆ. ಕಲ್ಯಾಣ ಕ್ರಾಂತಿಯ ನಂತರ ಬೇರೆಡೆಗಳಿಗೆ ತೆರಳಿದ ಶರಣರಲ್ಲಿ ಚೌಡಯ್ಯನವರು ಕೆಲವು ಶರಣರೊಡನೆ ಸುತ್ತೂರಿಗೆ ಆಗಮಿಸಿ ಶ್ರೀಗಳ ನೇತೃತ್ವದಲ್ಲಿ ಧರ್ಮ ಪ್ರಸಾರ ಮಾಡಿದರು. ಜಗದ್ಗುರು ಶ್ರೀ ಸಿದ್ಧನಂಜದೇಶಿಕರು ನಾಲ್ಕನೆಯ ಜಗದ್ಗುರುಗಳಾಗಿ ಕ್ರಿ.ಶ. ೧೧೩೦ನೇ ವರ್ಷದಲ್ಲಿ ಅಧಿಕಾರ ವಹಿಸಿಕೊಂಡರು. ನಂತರ ಶ್ರೀಮಠದ ಕೀರ್ತಿ ಹೆಚ್ಚಿ ಶಿವಶರಣರು, ಸಾಧಕರು ಅಧಿಕವಾಗಿ ಬರತೊಡಗಿದರು. ಶ್ರೀಮಠಕ್ಕೆ ಶ್ರೀಮಲೆಯ ಮಹದೇಶ್ವರರನ್ನು ಆಕರ್ಷಿಸಿದ ಆಧ್ಯಾತ್ಮ ಸಿದ್ಧಪುರುಷ ಶ್ರೀ ಸಿದ್ಧನಂಜದೇಶಿಕರ ಒಡನೆ ಹಲವು ಕಾಲ ಅಲ್ಲಿದ್ದು ಶಿವಯೋಗ ರಹಸ್ಯಗಳನ್ನು ಕಲಿತು, ಅನೇಕ ಪವಾಡಗಳನ್ನು ಮೆರೆದ ನೆನಪುಗಳು ಇಂದಿಗೂ ಜನಮನದಲ್ಲಿ ಮಾಸಿಲ್ಲ. ಈ ಕುರಿತು ಗುರುಸಿದ್ಧ ಕವಿಯ 'ಮಹದೇಶ್ವರ ಸಾಂಗತ್ಯ' ದೃಢಪಡಿಸುತ್ತದೆ. ಶ್ರೀ ಸಿದ್ಧನಂಜದೇಶಿಕರು ವೀರಶೈವ ಧರ್ಮತತ್ವಗಳನ್ನು ಕುರಿತು 'ಪರಮ ಶಿವಾಧಿಕ್ಯ ಚೂಡಾಮಣಿ' ಎಂಬ ವ್ಯಾಖ್ಯಾನ ಗ್ರಂಥ ಬರೆದ ವಿದ್ವಾಂಸರೂ ಆಗಿದ್ದರು.

ಕ್ರಿ.ಶ. ೧೨೪೦ನೇ ವರ್ಷದಲ್ಲಿ ಜಗದ್ಗುರು ಶ್ರೀ ಕಪನೀ ನಂಜುಂಡದೇಶಿಕೇಂದ್ರರು ಅಧಿಕಾರ ಸ್ವೀಕರಿಸಿದರು. ಇವರ ಪರಮಶಿಷ್ಯ ಸತ್ಕವಿ ಶಿವಲಿಂಗನ 'ಅಮುಗಿದೇವಯ್ಯಗಳ ಸಾಂಗತ್ಯ' ಕೃತಿಯಲ್ಲಿ ತನ್ನ ಗುರುಗಳ ಮಹೋನ್ನತ ವ್ಯಕ್ತಿತ್ವವನ್ನು ಮುಕ್ತಿದಾಯಕನೆಂದೂ ಬಣ್ಣಿಸಿದ್ದಾನೆ. ಇವರು ಸಿದ್ಧಪುರುಷರು, ಮಹಾಶಿವಯೋಗ ಸಂಪನ್ನರು, ಸಾಹಿತ್ಯ ಪ್ರಿಯರು ಎಂಬುದು ಗಮನಾರ್ಹ.

೧೩೮೦ರಲ್ಲಿ ಪಟ್ಟಾಧಿಕಾರಿಗಳಾದ ಜಗದ್ಗುರು ಶ್ರೀ ಸಿದ್ಧಮಲ್ಲ ಶಿವಾಚಾರ್ಯರ ಹೆಸರು ಶ್ರೀಪೀಠದ ಗುರುಪರಂಪರೆಯಲ್ಲಿ ಗಮನಾರ್ಹ. ಸಾಮಾಜಿಕ, ಧಾರ್ಮಿಕ ಆಂದೋಲನದ ನೇತೃತ್ವ ವಹಿಸಿದ್ದರು. ತೋಂಟದ ಸಿದ್ಧಲಿಂಗಯತಿಗಳ ಮಹತ್ವವನ್ನು ಗುರುತಿಸಿದ ಗೋಸಲ ಚೆನ್ನಬಸವೇಶ್ವರರ ಜೊತೆಗೆ ಶ್ರೀ ಸಿದ್ಧಮಲ್ಲ ಶಿವಾಚಾರ್ಯರೂ ಒಬ್ಬರು. ಸಿದ್ಧಮಲ್ಲೇಶ್ವರರು ಸುತ್ತೂರು ಬಳಿ ಇರುವ ಹರದನಹಳ್ಳಿಯ ಸಿದ್ಧಲಿಂಗೇಶ್ವರರನ್ನು ತಮ್ಮ ಮಠಕ್ಕೆ ಆಹ್ವಾನಿಸಿದ್ದರೆಂದು ತಿಳಿದು ಬರುತ್ತದೆ. ಮುಂದೆ ಸಿದ್ಧಲಿಂಗೇಶ್ವರರ ವ್ಯಕ್ತಿತ್ವಕ್ಕೆ ಮಾರು ಹೋಗಿ ಅವರನ್ನು ಹಿಂಬಾಲಿಸಿ ಹೋದ ವಿಷಯ ೧೬೬೦ರ ವಿರಕ್ತ ತೋಂಟದಾರ್ಯನ 'ಸಿದ್ಧೇಶ್ವರ ಪುರಾಣ'ದಿಂದ ತಿಳಿಯುತ್ತದೆ.

ನಂತರ ಶ್ರೀ ಪರ್ವತೇಂದ್ರ ಶಿವಾಚಾರ್ಯರು ಗುಪ್ತಯೋಗಿಗಳಾಗಿ, ಸಾಧಕರಾಗಿ ಬಾಳಿದ ಪವಾಡ ಪುರುಷರು. ನಂತರ ಬಂದ ಜಗದ್ಗುರು ಶ್ರೀ ಭಂಡಾರಿ ಬಸಪ್ಪ ಒಡೆಯರು ಕ್ರಿ.ಶ. ೧೪೯೦ನೇ ವರ್ಷದಲ್ಲಿ ಪಟ್ಟಕ್ಕೆ ಬಂದರು. ಇವರು ನಾಡಿನ ಅನೇಕ ಕಡೆ ಮಠದ ಶಿಷ್ಯಪರಂಪರೆಯ ಆಗು ಹೋಗುಗಳಿಗೆ ಸ್ಪಂದಿಸುತ್ತಿದ್ದರು.

ವಿಜಯನಗರದ ಅರಸರಿಗೂ ಬಸಪ್ಪ ಒಡೆಯರ ಸೇವಾಕ್ಷೇತ್ರದ ಪರಿಚಯ ಶಾಸನಗಳಲ್ಲಿ ನಿರೂಪಿತವಾಗಿದೆ. ಸಾಳುವ ಲಿಂಗರಾಜರು ಸುತ್ತೂರಿನಲ್ಲೂ, ದೇವನೂರ ಮಹಾಮಂಡಲಕ್ಕೆ ಸಾಳುವ ನರಸಿಂಹನ ಬಂಧುವಾದ ಲಿಂಗರಾಜನು ಮಹಾಮಾಂಡಲಕನಾಗಿ ಸುತ್ತೂರು ಮಠದ ಸಂಪರ್ಕದಲ್ಲಿದ್ದುದು ತಿಳಿದು ಬರುತ್ತದೆ. ಇವರು ನಂಜನಗೂಡಿನ ಕಪಿಲಾ-ಕೌಂಡಿನ್ಯ ನದಿಗಳ ಸಂಗಮದಲ್ಲಿ ದೇವಾಲಯವನ್ನು ನಿರ್ಮಿಸಿ ಸಂಗಮೇಶ್ವರ ಲಿಂಗ ಸ್ಥಾಪನೆ ಮಾಡಿದ ಬಗ್ಗೆ ೧೫೧೪ರ ಶಾಸನ ತಿಳಿಸುತ್ತದೆ.

ಹತ್ತನೇ ಪೀಠಾಧಿಕಾರಿ ಜಗದ್ಗುರು ಶ್ರೀ ಕೊಗಲೂರು ನಂಜುಂಡದೇಶಿಕೇಂದ್ರರು ಪರಂಪರೆಯ ಸೇತುವಾಗಿ ಮುಂದಿನ ಪೀಠಾಧಿಕಾರಿ ಪ್ರಸಿದ್ಧ ವಚನಕಾರ ಶಿವಶರಣ ಘನಲಿಂಗಿ ದೇವರನ್ನು ಅನುಗೊಳಿಸುವ ಮಹತ್ಕಾರ್ಯ ನಿರ್ವಹಿಸಿದರು. ಶ್ರೀ ಘನಲಿಂಗದೇವರು ಮಹಿಮಾನ್ವಿತರು. ೧೫ನೆಯ ಶತಮಾನದಲ್ಲಿ ನಾಡಿನ ಉದ್ದಗಲಕ್ಕೂ ಸಿದ್ಧಲಿಂಗೇಶ್ವರ ನೇತೃತ್ವದಲ್ಲಿ ಸಂಚರಿಸಿ ಬಂದು, ಅನುಭಾವ ಗೋಷ್ಠಿಗೆ ಕಾರಣಕರ್ತರು. ಸಿದ್ಧಮಲ್ಲೇಶ್ವರರೂ, ಘನಲಿಂಗಿಗಳೂ ಏಕಕಾಲದಲ್ಲಿ ತುಮಕೂರಿನಲ್ಲಿ ನಡೆದ ಉತ್ಸವದಲ್ಲಿ ಭಾಗಿಯಾಗಿದ್ದರೆಂದು ಮರಿ ತೋಂಟದಾರ್ಯರ 'ಸಿದ್ಧೇಶ್ವರ ಪುರಾಣ'ದಲ್ಲಿ ಉಲ್ಲೇಖವಿದೆ. ಸತಿಪತಿ ಭಾವದ ವಚನಗಳು ಅಪೂರ್ವ ಕೊಡುಗೆಗಳಾಗಿವೆ. ತಮ್ಮ ವಚನದಲ್ಲಿ ಶ್ರೀಮಠದ ಗುರುಪರಂಪರೆ, ದೀಕ್ಷಾಗುರು, ಸಿದ್ಧಲಿಂಗಯತಿಗಳ ಸಮಾಗಮ ಕುರಿತು, ಆಧ್ಯಾತ್ಮ ಪ್ರಗತಿ ಬಗ್ಗೆ ಹೇಳಿದ್ದಾರೆ.

ನಂತರ ಬಂದ ಹನ್ನೆರಡನೇ ಪೀಠಾಧ್ಯಕ್ಷರು ಜಗದ್ಗುರು ಇಮ್ಮಡಿ ಶ್ರೀ ಶಿವರಾತ್ರೀಶ್ವರ ಸ್ವಾಮಿಗಳು ೧೫೫೦ರಲ್ಲಿ ನಿಯೋಜಿತರಾದಾಗ ಸುತ್ತೂರು ಮಠ ನಾಡಿನಲ್ಲಿ ಕೀರ್ತಿಗಳಿಸಿತ್ತು. ಶ್ರೇಷ್ಠ ವಿದ್ವಾಂಸರು, ಗ್ರಂಥ ಕರ್ತರೂ ಆದ ಇವರು 'ವೃಷಭೇಂದ್ರ ವಿಜಯ ಪುರಾಣ' ಕಾವ್ಯ ಬರೆದರೆಂದು ತಿಳಿಯುತ್ತದೆ. ನಂತರ ೧೬೦೮ರಲ್ಲಿ ಜಗದ್ಗುರು ಶ್ರೀ ಗುರುನಂಜದೇಶಿಕೇಂದ್ರರು ಕೇರಳದ ಕಡೆ ಸಂಚಾರದಲ್ಲಿ

## ಕ್ಷೇತ್ರ ಪರಿಚಯ

ಕಾಲ ಕಳೆದು ಭಕ್ತರನ್ನು ಸಂಪಾದಿಸಿದರು. ಜಗದ್ಗುರು ಶ್ರೀ ಗುರುಚೆನ್ನಬಸವ ಶಿವಾಚಾರ್ಯರು ೧೫ನೆಯ ಜಗದ್ಗುರು ರೇವಣಾರಾಧ್ಯರಿಂದ 'ಶಿವಾಧಿಕ ಶಿಖಾಮಣಿ' ಗ್ರಂಥಕ್ಕೆ ಟೀಕು ಬರೆಸಿದರು. ದೊಡ್ಡ ಕೃಷ್ಣ ರಾಜ ಒಡೆಯರು ಅರಮನೆಗೆ ಆಹ್ವಾನಿಸಿ ಶ್ರೀರಂಗ ಪಟ್ಟಣದಲ್ಲಿ ಒಂದು ಮಠ ಕಟ್ಟಿಸಿಕೊಟ್ಟಂತೆ ತಿಳಿಯುತ್ತದೆ. ನಂತರ ಬಂದ ಶ್ರೀಗುರು ಪಂಚಾಕ್ಷರ ದೇಶಿಕೇಂದ್ರರು, ಶ್ರೀ ಚಿದ್ಘನ ಶಿವಾಚಾರ್ಯರು ಶಿಷ್ಯರನ್ನು ಭಕ್ತರನ್ನು ಉದ್ಧರಿಸಿದಂತೆ ತಿಳಿಯುತ್ತದೆ.

ಕ್ರಿ.ಶ. ೧೭೫೦ರಲ್ಲಿ ಜಗದ್ಗುರುಗಳಾಗಿ ಶ್ರೀ ಚನ್ನವೀರ ದೇಶಿಕೇಂದ್ರರು ಅಧಿಕಾರಕ್ಕೆ ಬಂದರು. ಹೈದರಾಲಿಯ ಕಾಲದಲ್ಲಿ ಶ್ರೀಮಠಕ್ಕೆ ಗೌರವಾದಿಗಳನ್ನು ಮುಂದುವರಿಸಿದ್ದರು. ಇವರು ಉಡುಪಿಯ ಬಳಿ ಶಂಕರನಾರಾಯಣದಲ್ಲಿ ಒಂದು ಮಠ ಸ್ಥಾಪಿಸಿದರು. ಅದಕ್ಕೆ ಬೇಕಾದ ಅಗತ್ಯಗಳನ್ನು ಪೂರೈಸಲು ಹೈದರಾಲಿ ಆಜ್ಞೆ ಹೊರಡಿಸಿದ್ದನು. ಇವರು ಕೊಡಗಿನ ಬಳಿ ಸಹಾ ಒಂದು ಮಠ ನಿರ್ಮಿಸಿದರು. ನಂತರ ಬಂದ ಶ್ರೀಮಹಾಂತ ದೇಶಿಕೇಂದ್ರ ಜಗದ್ಗುರುಗಳು ಆಧ್ಯಾತ್ಮ ಚಿಂತಕರು, ವಿಚಾರವಂತರು. ಮುಮ್ಮಡಿ ಕೃಷ್ಣರಾಜರು ಇವರ ಬಗ್ಗೆ ಅಪಾರ ಭಕ್ತಿ ಗೌರವ ತಳೆದಿದ್ದರು. ಆದಿಗುರುಗಳ ಗದ್ದುಗೆ, ಮಠದ ಜೀರ್ಣೋದ್ಧಾರ ಮಾಡಿಸಿ ೧೮೨೨ರಲ್ಲಿ ಶ್ರೀ ಬಸವದೇಶಿಕೇಂದ್ರರಿಗೆ ಅಧಿಕಾರ ವಹಿಸಿ ಕೇರಳ ಯಾತ್ರೆ ಹೋದರು. ಅಲ್ಪಾಯು ಗಳಾದ ಬಸವದೇಶಿಕೇಂದ್ರರ ನಂತರ ಮತ್ತೆ ಹಿಂತಿರುಗಿ ಬಂದು ಅಧಿಕಾರ ವಹಿಸಿಕೊಂಡರು. ರಂಭಾಪುರಿ ರೇಣುಕ ಪೀಠ ಮತ್ತು ಸ್ಥಿರ ಮೂರ್ತಿಗಳ ವ್ಯವಹಾರ ವೈಷಮ್ಯವನ್ನು ಮುಮ್ಮಡಿ ಕೃಷ್ಣರಾಜ ಒಡೆಯರ ಬಯಕೆಯಂತೆ ಮಧ್ಯಸ್ಥಿಕೆಗೆ ವಹಿಸಿ ಸ್ನೇಹ ಸಂಧಾನ ಮಾಡಿದರು. ಜಗದ್ಗುರು ಸಿದ್ಧಮಲ್ಲ ಶಿವಾಚಾರ್ಯರು ೧೮೪೨ರಲ್ಲಿ ನಿಯೋಜಿತರಾಗಿ ಧರ್ಮ ತತ್ವಗಳ ಪ್ರಸಾರ, ದಾರ್ಶನಿಕರಿಗೆ, ಪ್ರೋತ್ಸಾಹ ನೀಡಿದರು. ಇವರನ್ನು ಕುರಿತು ನಗರ್ತಿ ನಂಜುಂಡಶಾಸ್ತ್ರಿಗಳು 'ಸ್ತೋತ್ರ ರತ್ನಾಕರ' ಕೃತಿ ರಚಿಸಿದ್ದಾರೆ. ಇವರ ಕಾಲದಲ್ಲಿ ಮಲ್ಲನ ಮೂಲೆಯ ಕಂಬಳೀಶ ಯತಿ ಶ್ರೀಮಠಕ್ಕೆ ಆಗಮಿಸಿದ್ದರು. ಕ್ರಿ.ಶ. ೧೮೮೪ರಲ್ಲಿ ಶ್ರೀಪೀಠದ ೨೧ನೆಯ ಜಗದ್ಗುರು ಶ್ರೀ ಶಿವರಾತ್ರಿ ದೇಶಿಕೇಂದ್ರರು ಶಿವಯೋಗ ಸಂಪನ್ನರು. ಇವರು ನೀಡುತ್ತಿದ್ದ ಭಸ್ಮ ಭವರೋಗಗಳಿಗೆ ಮದ್ದಾಗಿತ್ತು ಎಂದು ಹೇಳುತ್ತಾರೆ. ಶ್ರೀಪೀಠದ ೨೨ನೆಯ ಜಗದ್ಗುರು ಶ್ರೀ ಶಿವರಾತ್ರೀಶ್ವರ ಮಹಾಸ್ವಾಮಿಗಳು 'ಮಂತ್ರ ಮಹರ್ಷಿ' ಗಳೆಂದೇ ಹೆಸರಾದವರು. ತಮ್ಮ ೧೬ನೆಯ ವಯಸ್ಸಿನಿಂದಲೇ ಶ್ರೀಮಠದಿಂದ ಆಗಬೇಕಾದ ಸೇವಾಕಾರ್ಯಗಳ ಬಗ್ಗೆ ಸ್ಪಷ್ಟ ಆಲೋಚನೆ ಹೊಂದಿದ್ದರು. ಜ್ಞಾನ ಪ್ರಸಾರಕ್ಕಾಗಿ ಮೈಸೂರಿನಲ್ಲಿ ಕ್ಯಾತನಹಳ್ಳಿ ಶ್ರೀ ಸಿದ್ಧಲಿಂಗಯ್ಯನವರ ವಿದ್ಯಾರ್ಥಿ ನಿಲಯ, ಸಂಸ್ಕೃತ ಪಾಠಶಾಲೆಗಳನ್ನು ತೆರೆದು ಹಳ್ಳಿಯ ಬಡ ವಿದ್ಯಾರ್ಥಿಗಳಿಗೆ ಜ್ಞಾನ ದಾಸೋಹವನ್ನು ೧೯೩೦ರಲ್ಲಿ ಆರಂಭಿಸಿದರು. ಹಳೆಯ ದೇವಾಲಯದ ಪುನರ್‌ನಿರ್ಮಾಣ, ಪುರಾತನ ಶಿಲಾಲೇಖಗಳು, ತಾಮ್ರ ಶಾಸನಗಳು, ಸನ್ನದುಗಳ ದಾಖಲೆಗಳನ್ನು ವ್ಯವಸ್ಥಿತವಾಗಿ ರಕ್ಷಣೆ ಪಡೆದದ್ದು, ಮಾನಸಿಕ ಜಪದಿಂದ ಹಲವು ಕೋಟಿ ಷಡಕ್ಷರಿ ಮಹಾಮಂತ್ರಗಳನ್ನು ಬರೆದು ತಪಸ್ವಿಗಳು, ಸತ್ಕವಿ ಶ್ರೀ ಸಂಗಪ್ಪ ಶಾಸ್ತ್ರಿಗಳಿಗೆ ಪ್ರೋತ್ಸಾಹ ನೀಡಿ 'ಶ್ರೀ ಸುತ್ತೂರು ಸಿಂಹಾಸನದ ಗುರುಪರಂಪರೆ' ಎಂಬ ಷಟ್ಪದೀ ಕಾವ್ಯ ಬರೆಯಲು ಪ್ರೇರಣೆ ನೀಡಿದ್ದಲ್ಲದೆ ಸ್ವತಃ 'ಶಿವಮಂತ್ರಮಾಯೆ' ಎಂಬ ಸಂಗ್ರಹ ಗ್ರಂಥ ರಚಿಸಿದರು.

ಇವರ ನಂತರ ೧೯೨೮ರಲ್ಲಿ ಶ್ರೀ ಶಿವರಾತ್ರೀ ರಾಜೇಂದ್ರ ಮಹಾಸ್ವಾಮಿಗಳು ಜಗದ್ಗುರು ಆಗಿ ನಿಯೋಜಿತರಾದರು. ಇವರ ಕಾಲದಲ್ಲಿ ವಿದ್ಯಾಪ್ರಸಾದದ ಕಾರ್ಯ ಹೆಚ್ಚಿ ಶ್ರೀ ಶಿವರಾತ್ರೀಶ್ವರ ಮಹಾವಿದ್ಯಾಪೀಠವು ಸ್ಥಾಪನೆಯಾಗಿ, ಶಾಲಾ ಕಾಲೇಜುಗಳು, ಪ್ರಸಾದ ನಿಲಯಗಳು ಮೈಸೂರು ಜಿಲ್ಲೆಯ ವಿವಿಧ ಭಾಗಗಳಲ್ಲಿ ಸ್ಥಾಪನೆಯಾದವು. ಸಂಸ್ಥೆಗಳ ಏಳ್ಗೆಗೆ ತನುಮನ ಧನಗಳನ್ನು ಅರ್ಪಿಸಿ ಗ್ರಾಮಾಂತರ ಪ್ರದೇಶಗಳಲ್ಲಿ ಭಿಕ್ಷೆಯನ್ನು ಮಾಡಿ ಸಾಮಗ್ರಿಗಳನ್ನು ಒದಗಿಸುತ್ತಿದ್ದುದು ಪವಾಡ ಸದೃಶವಾಗಿದೆ. ಅಸಂಖ್ಯಾತ ಗ್ರಾಮೀಣ ಬಡ ವಿದ್ಯಾರ್ಥಿಗಳುಗೆ ಉಚಿತ ಪ್ರಸಾದ ವ್ಯವಸ್ಥೆ ಮಾಡಿ, ಶಿಕ್ಷಣ ಸೌಲಭ್ಯ ನೀಡಿ ಮಾತೃಸದೃಶರಾಗಿದ್ದರು. ಅನ್ನದಾಸೋಹ, ಜ್ಞಾನದಾಸೋಹಗಳ ತವನಿಧಿಯಾದರು. ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ, ಶ್ರೀ ಶಿವರಾತ್ರೀಶ್ವರ ಸಂಗೀತ ಸಭಾ ಮುಂತಾದ ಸಾಹಿತ್ಯ ಸಂಸ್ಕೃತಿಗಳಿಗೆ ಪ್ರೋತ್ಸಾಹವಿತ್ತರು. ಪ್ರಸ್ತುತ ಜಗದ್ಗುರು ಶ್ರೀ ಶಿವರಾತ್ರಿ ದೇಶಿಕೇಂದ್ರ ಸ್ವಾಮಿಗಳು ಸುತ್ತೂರು ಮಠದ ಶೈಕ್ಷಣಿಕ ವ್ಯಾಪ್ತಿಯನ್ನು ಭಾರತದ ವಿವಿಧ ರಾಜ್ಯ ಗಳಲ್ಲಿ ಹಾಗೂ ವಿದೇಶಗಳಲ್ಲೂ ಪ್ರಸರಿಸಿ ವಿಶ್ವವಿಖ್ಯಾತ ವನ್ನಾಗಿಸಿದ್ದಾರೆ. ೨೫೦ ಕ್ಕೂ ಹೆಚ್ಚು ಶಿಕ್ಷಣ ಸಂಸ್ಥೆಗಳು ಕಾರ್ಯ ನಿರ್ವಹಿಸುತ್ತಿವೆ.

ಹೀಗೆ ಸುತ್ತೂರು ಶ್ರೀಮಠದ ಗುರುಪರಂಪರೆ ಹಿರಿದಾದುದು. ಇಂತಹ ಶಿವಾನುಭವಿಗಳೂ, ಶರಣರೂ ಆದ ಎಲ್ಲಾ ಜಗದ್ಗುರುಗಳ ಅವಿರತ ಸೇವೆ, ಶ್ರಮದಿಂದ ಸಮಾಜಕ್ಕೆ ಸುತ್ತೂರು ವಿಶಿಷ್ಟ ಕೊಡುಗೆಯನ್ನು ನೀಡುತ್ತ ಬಂದು ವೀರಶೈವರ ಬಹುಮುಖ್ಯ ಶರಣ ಕ್ಷೇತ್ರಗಳಲ್ಲಿ ಒಂದಾಗಿದೆ.

❋



## ರೋಗ ಚಿಕಿತ್ಸೆ

### ಚಿಕೂನ್ ಗುನ್ಯ ರೋಗಕ್ಕೆ ದಿವ್ಯ ಔಷಧಿ

**ಪ್ರೊ. ಪಂಡಿತ್ ಹೆಚ್. ಹನುಮಂತರಾಯ,**
**ಮೇ॥ ಕುಮಾರ್ ಆಯುರ್ವೇದ ಆಶ್ರಮ, ನಂ. 4175, 13ನೇ ಮುಖ್ಯರಸ್ತೆ, 'ಇ' ಬ್ಲಾಕ್, 2ನೇ ಹಂತ, ರಾಜಾಜಿನಗರ,**
**ಬೆಂಗಳೂರು–560 010. ದೂರವಾಣಿ :23323184, ಮೊಬೈಲ್: 9901572306.**

ಚಿಕೂನ್ ಗುನ್ಯ ರೋಗಕ್ಕೆ ಆಯುರ್ವೇದದಲ್ಲಿ ಪರಿಣಾಮಕಾರಿಯಾದ ಔಷಧಿಗಳಿವೆ. ಇದು ವಾತಪ್ರಧಾನವಾದ ಜ್ವರದಿಂದ ಕೂಡಿದ ರೋಗ. ಸಕಾಲಕ್ಕೆ ಔಷಧೋಪಚಾರ ಮಾಡಿದರೆ ಜ್ವರ ಮೂರೇ ದಿನದಲ್ಲಿ ನಿಯಂತ್ರಣಕ್ಕೆ ಬರುತ್ತದೆ. ವಾತ ಪ್ರಧಾನವಾದ ರೋಗವಾಗಿರುವುದರಿಂದ ಕೀಲು ಕೀಲು ಗಳಲ್ಲಿ ನೋವು ಹೆಚ್ಚಾಗಿರುತ್ತದೆ. ಕೀಲುಗಳಲ್ಲಿ ಊತ ಸಹ ಕಾಣಿಸಬಹುದು. ವಾತ ರೋಗಿಗಳಿಗೆ ಇದರ ಹಿಂಸೆ ಜಾಸ್ತಿ. ಇದರಿಂದ ಯಾರಿಗೂ ಪ್ರಾಣಾಪಾಯವಿರುವುದಿಲ್ಲ.

ಆಯುರ್ವೇದದಲ್ಲಿ ತ್ರಿಶೂನ್ ಮಾತ್ರೆಗಳು, ವಾತೋಲಿನ್ ಮುಲಾಮ, ಕುಸುಮ ಅಮೃತಚೂರ್ಣಗಳು ಅಮೃತ ಗುಗ್ಗುಲು (ಭಾ.ಪ್ರ.) ಮತ್ತು ರಾಸ್ನಾ ಏರಂಡಾದಿ ಕ್ವಾಥ ಚೂರ್ಣ ಈ ನಾಲ್ಕು ಔಷಧಿಗಳು ಹೆಚ್ಚು ಖರ್ಚಿಲ್ಲದಂತೆ ರೋಗವನ್ನು ನಿಯಂತಿಸಲಬಲ್ಲವು.

**ಉಪಯೋಗಿಸುವ ವಿಧಾನ :**

ತ್ರಿಶೂನ್ ಮಾತ್ರೆಗಳು ಒಂದು ವೇಳೆಗೆ 2 ಮಾತ್ರೆಗಳಂತೆ ಮೂರು ವೇಳೆ ಸ್ವೀಕರಿಸುವುದು; ಮೂರು ದಿನ ಸಾಕು. ಮೂರು ದಿನಗಳ ನಂತರವೂ ಒಳಜ್ವರ ಇದೆಯೆಂದು ಕಂಡು ಬಂದಲ್ಲಿ ದಿನ ಒಂದಕ್ಕೆ ಒಂದು ವೇಳೆಗೆ ಒಂದು ಮಾತ್ರೆಯಂತೆ ಮೂರು ವೇಳೆ ಸ್ವೀಕರಿಸಬೇಕು. ಮೂರು ದಿನ ಸಾಕು. ಜ್ವರ ಸಂಪೂರ್ಣ ನಿಯಂತ್ರಣಕ್ಕೆ ಬರುತ್ತದೆ. ಚಿಕ್ಕ ವಯಸ್ಸಿನವರಿಗೆ ದಿನಕ್ಕೆ ೧–೧–೧ ಮಾತ್ರೆಯಂತೆ ಮೂರು ದಿನ ಸಾಕಾದೀತು.

**ರಾಸ್ನಾ ಏರಂಡಾದಿ ಕ್ವಾಥಚೂರ್ಣ :**

ಪ್ರತಿ ಪೊಟ್ಟಣದಲ್ಲಿ ೫೦ ಗ್ರಾಂ ಚೂರ್ಣ ಇರುತ್ತದೆ. ಇದನ್ನು ಒಂದು ಕಲಾಯಿ ಅಥವಾ ಮಣ್ಣಿನ ಪಾತ್ರೆ ಇಲ್ಲವೆ ಸ್ಟೇನ್‌ಲೆಸ್ ಪಾತ್ರೆಯಲ್ಲಿ ಹಾಕಿ ಅದಕ್ಕೆ ಅರ್ಧ ಲೀಟರು ನೀರನ್ನು ಹಾಕಿ ಒಲೆಯ ಮೇಲೆ ಇಟ್ಟು, ಸಣ್ಣ ಉರಿಯಿಂದ ಕಾಯಿಸಬೇಕು. ಮುಕ್ಕಾಲು ಭಾಗ ನೀರು ಹಿಂಗಿ ಒಂದು ಭಾಗ ನೀರು ಉಳಿದಾಗ ಒಲೆಯಿಂದ ಕೆಳಗೆ ಇಳಿಸಿ ಆರಲು ಬಿಡಿ. ಬಿಸಿ ಆರಿದ ನಂತರ ಕಷಾಯವನ್ನು ಹಿಂಡಿ ಶೋಧಿಸಿ ಕೊಳ್ಳಿ, ಶೋಧಿಸಿಕೊಂಡ ಕಷಾಯವನ್ನು ಮೂರು ಭಾಗ ಮಾಡಿ ಒಂದು ದಿನದಲ್ಲಿ ಮೂರು ವೇಳೆ ಕುಡಿಯಬೇಕು. ಕಾಯಿಲೆ ಆರಂಭ ಆದ ದಿನದಿಂದಲೇ ಕಷಾಯವನ್ನು ಕುಡಿಯಬೇಕು. ಈ ಕಷಾಯವನ್ನು ೪೫ ದಿನಗಳವರೆಗೆ ತಯಾರಿಸಿಕೊಂಡು ಕುಡಿಯಬೇಕು. ಇದರೊಂದಿಗೆ ಅಮೃತ ಗುಗ್ಗುಲು (ಭಾ.ಪ್ರ) ೧–೧–೧ ಮಾತ್ರೆ ನುಂಗಬೇಕು.

ಈ ಕಾಯಿಲೆಯಲ್ಲಿ ಕೆಲವರಿಗೆ ಮಲಪ್ರವೃತ್ತಿ ಸರಿಯಾಗಿ ಆಗುವುದಿಲ್ಲ. ಅಂತಹವರು ಮೇಲಿನ ಕಷಾಯದಲ್ಲಿ ಒಂದು ಚಮಚ ಹರಳು ಎಣ್ಣೆ ಸೇರಿಸಿ ಕುಡಿಯಬೇಕು. ಮಲ ಪ್ರವೃತ್ತಿಯ ತೊಂದರೆ ಇಲ್ಲದವರು ಒಂದು ಟೀ ಚಮಚ ತುಪ್ಪವನ್ನು ಕಷಾಯದಲ್ಲಿ ಸೇರಿಸಿ ಕುಡಿದರೆ ಸುಸ್ತು, ಸಂಕಟ, ಆಯಾಸ ಕಾಣುವುದಿಲ್ಲ.

ಅತಿಯಾದ ಜ್ವರದಿಂದ ಕೆಲವರಿಗೆ ಬಾಯಲ್ಲಿ ಹುಣ್ಣು ಕಾಣಿಸಬಹುದು. ಅಂತಹ ಸಂದರ್ಭದಲ್ಲಿ ಕುಸುಮ ಅಮೃತ ಚೂರ್ಣವನ್ನು ಒಂದು ವೇಳೆಗೆ ಒಂದು 'ಟೀ' ಚಮಚೆ ಯಷ್ಟನ್ನು ಬೆಣ್ಣೆ ಅಥವಾ ಸಿಹಿ ಮಜ್ಜಿಗೆಯಲ್ಲಿ ಕಲಸಿ ತಿನ್ನಬೇಕು. ಬಾಯಲ್ಲಿ ಹುಣ್ಣು ವಾಸಿಯಾದ ನಂತರವೂ ಈ ಚೂರ್ಣವನ್ನು ಉಪಯೋಗಿಸಬಹುದು. ಇದರಿಂದ ಜೀರ್ಣಾಂಗಗಳಿಗೆ ಬಲ ಬರುತ್ತದೆ.

**ವಾತೋಲಿನ್ ಮುಲಾಮು :**

ನೋವಿರುವ ಭಾಗಗಳಿಗೆ ಈ ವಾತೋಲಿನ್ ಮುಲಾಮನ್ನು ಹಚ್ಚಿ ಮೃದುವಾಗಿ ತಿಕ್ಕಬೇಕು. ದಿನಕ್ಕೆ ಎರಡು ವೇಳೆ ಸಾಕಾದೀತು.

ಈ ಕಾಯಿಲೆ ಬಂದ ಮೊದಲ ಐದು ದಿನ

ಸಂಪೂರ್ಣ ರೆಸ್ಟ್‌ನಲ್ಲಿರಬೇಕು. ನಂತರ ಮನೆಗೆಲಸವನ್ನು ಸ್ವಲ್ಪ ಸ್ವಲ್ಪ ಮಾಡಿಕೊಳ್ಳಬಹುದು. ಏಳು ದಿನಗಳ ನಂತರ ಆಯಾಸವಾಗದಂತಹ ದೈನಂದಿನ ಕೆಲಸಗಳನ್ನು ಮಾಡಿಕೊಳ್ಳಬಹುದು. ತಮ್ಮ ತಮ್ಮ ಮನೆಯಲ್ಲಿಯೇ ಇದ್ದುಕೊಂಡು ಈ ಔಷಧೋಪಚಾರವನ್ನು ಮಾಡಿಕೊಂಡು ಆರೋಗ್ಯವಂತ ರಾಗಬಹುದು. ಹೆಚ್ಚು ಖರ್ಚು ಬರುವುದಿಲ್ಲ.

**ತಡೆಮದ್ದು :**

ಚೆನ್ನಾಗಿ ಬೆಳೆದ ಅಮೃತ ಬಳ್ಳಿಯನ್ನು ಆರು ಅಂಗುಲ ಎಲೆ ಸಹಿತ ಕತ್ತರಿಸಿ ತಂದು ಸಣ್ಣ ಸಣ್ಣ ಚೂರುಗಳಾಗಿ ಕತ್ತರಿಸಿ ಜಜ್ಜಿ ಅರ್ಧ ಲೀಟರು ನೀರಿನಲ್ಲಿ ಹಾಕಿ ಕಾಲುಭಾಗ ಕಷಾಯ ತೆಗೆದು ಮುರು ಹೊತ್ತು ಕುಡಿಯಬೇಕು. ಏಳು ಅಥವಾ ಹದಿನಾಲ್ಕು ದಿನ ಕಷಾಯವನ್ನು ಮಾಡಿಕೊಂಡು ಕುಡಿದರೆ ಚಿಕೂನ್ ಗುನ್ಯ ತಡೆಗಟ್ಟಬಹುದು.

**ಪಥ್ಯ:** ಜ್ವರ ಕಂಡ ದಿನದಿಂದ ಜ್ವರ ಬಿಡುವವರೆಗೆ ಅಕ್ಕಿ ಗಂಜಿಯಲ್ಲಿ ರೋಗಿ ಇರಬೇಕು. ಜ್ವರ ನಿಂತ ನಂತರ ಮೃದುವಾಗಿ ಬೇಯಿಸಿದ ಹಳೇ ಅಕ್ಕಿ ಅನ್ನ, ತಿಳಿ ಸಾರು ಸೇವಿಸಬೇಕು. ಹತ್ತು ದಿನಗಳ ನಂತರ ಜೀರ್ಣಶಕ್ತಿಗನುಗುಣವಾಗಿ ಮಿತವಾಗಿ, ಹಿತವಾಗಿ ಬೇಕಾದುದನ್ನು ಊಟ ಮಾಡಬಹುದು.

ಆಲೂಗಡ್ಡೆ ಹಾಗೂ ಇತರೆ ಗೆಡ್ಡೆ ಗೆಣಸು ಮತ್ತು ವಾಯುಕಾರಕ ಧಾನ್ಯಗಳನ್ನು ಕಾಯಿಲೆ ಸಂಪೂರ್ಣವಾಗಿ ಹತೋಟಿಗೆ ಬರುವವರೆಗೂ ಬಳಸಬಾರದು. ಮೇಲಿನ ಔಷಧಿಗಳು ಆಯುರ್ವೇದ ಔಷಧಿ ಅಂಗಡಿಗಳಲ್ಲಿ ದೊರೆಯುತ್ತವೆ.

*

### ಎಳನೀರು

ಶರೀರದಲ್ಲಿ ಉಷ್ಣತೆಯನ್ನು ಕಡಿಮೆ ಮಾಡಲು ನೆರವಾಗುತ್ತದೆ. ಎಳನೀರು ಮೂತ್ರಕೋಶ ಶುಭ್ರಗೊಳಿಸಿ ಪಚನ ಕ್ರಿಯೆ ಹೆಚ್ಚಿಸುತ್ತದೆ. ಚರ್ಮ, ಗಡ್ಡೆ ಕುರುಹುಗಳಿಂದ ಬಾಧೆ ಪಡುವವರಿಗೆ ಎಳನೀರು ಉಪಶಮನ ನೀಡುತ್ತದೆ. ಆರೋಗ್ಯಕರವಾದ, ಪರಿಶುದ್ಧವಾದ ಪಾನೀಯವಾಗಿರುವ ಎಳನೀರು ಎಲ್ಲ ವಯೋಮಾನದವರು ಎಲ್ಲ ಋತುಮಾನದಲ್ಲಿ ಸೇವಿಸಬಹುದು.

### 'ಸಿದ್ಧಗಂಗಾ' ಮಾಸಪತ್ರಿಕೆ ಆಜೀವ ಸದಸ್ಯರಲ್ಲಿ ಮನವಿ

'ಸಿದ್ಧಗಂಗಾ' ಮುನ್ನಡೆಗೆ ಇರುವ ಆರ್ಥಿಕ ಪರಿಸ್ಥಿತಿಯನ್ನು ನಿಮ್ಮ ಗಮನಕ್ಕೆ ನಿವೇದಿಸಿಕೊಳ್ಳಲಾಗುತ್ತಿದೆ. ಈ ಸಮಸ್ಯೆಯನ್ನು ಮನಗಂಡು ಆಜೀವ ಸದಸ್ಯರು ಸ್ಪಂದಿಸಿ ಹೆಚ್ಚುವರಿ ಚಂದಾ ೩೦೦ ರೂ./೪೦೦ ರೂ. ಉದಾರತೆಯಿಂದ ಸಂದಾಯ ಮಾಡುತ್ತಿದ್ದಾರೆ. ಅವರಿಗೆ ಶ್ರೀಮಠದ ಪರವಾಗಿ ಧನ್ಯವಾದಗಳು.

ಸಂದಾಯ ಮಾಡದೆ ಇರುವವರಲ್ಲಿ ನಮ್ರ ವಿನಂತಿ ಏನೆಂದರೆ ಪ್ರಸ್ತುತವಿರುವ ಆಜೀವ ಚಂದಾ ೧೦೦೦/- ರೂ.ಗೆ. ಸರಿಹೊಂದುವಂತೆ ಉಳಿಕೆ ೩೦೦/- ರೂ./ ೪೦೦/- ರೂ. ಶೀಘ್ರವಾಗಿ ಸಂದಾಯ ಮಾಡಿ 'ಸಿದ್ಧಗಂಗಾ' ನಿರಂತರವಾಗಿ ಮುನ್ನಡೆಯಲು ಹರಸಿ ಹಾರೈಸಬೇಕಾಗಿ ಕೋರುತ್ತೇವೆ.

**ತಮ್ಮ ವಿಳಾಸದಲ್ಲಿರುವ LM ನಂಬರ್ ಸೂಚಿಸಿ** ಬಾಕಿ ಆಜೀವ ಚಂದಾವನ್ನು ನಗದು/ ಎಂ.ಒ/ ಚೆಕ್/ ಡಿ.ಡಿ. ಮೂಲಕ **'ಸಿದ್ಧಗಂಗಾ'** ಮಾಸಪತ್ರಿಕೆ ಹೆಸರಿನಲ್ಲಿ ಈ ಕೆಳಗಿನ ವಿಳಾಸಕ್ಕೆ ದಯಮಾಡಿ ಕಳಿಸಲು ವಿನಂತಿಸಿಕೊಳ್ಳಲಾಗಿದೆ.

ನಿಮ್ಮ ವಿಳಾಸ ಬದಲಾದಾಗ ನಿಮಗೆ ಕೊಟ್ಟಿರುವ ಆಜೀವ ಸದಸ್ಯತ್ವದ ನಂಬರನ್ನು ತಪ್ಪದೆ ತಿಳಿಸಿರಿ. ಇದರಿಂದ ನೇರವಾಗಿ ಪತ್ರಿಕೆ ನಿಮಗೆ ತಲುಪಲು ಸಾಧ್ಯವಾಗುತ್ತದೆ. ಆಗಾಗ್ಗೆ ಬದಲಾಗುವ ನಿಮ್ಮ ಹೊಸ ವಿಳಾಸವನ್ನು ಪತ್ರಿಕಾ ಕಾರ್ಯಾಲಯಕ್ಕೆ ತಿಳಿಸಲು ಕೋರಲಾಗಿದೆ.

**ಪ್ರಕಾಶಕರು**
'ಸಿದ್ಧಗಂಗಾ' ಮಾಸಪತ್ರಿಕೆ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -೫೭೨ ೧೦೪.







## ನಿಸರ್ಗೋಪಚಾರದಲ್ಲಿ ಸ್ನಾನದ ಸ್ಥಾನ

-ಜಿ.ವಿ.ವಿ. ಶಾಸ್ತ್ರಿ
'ನಿಸರ್ಗ ಯೋಗಧಾಮ'
ನಂ. ೨/೨೦೫೫, ೧೧ನೇ ಕ್ರಾಸ್,
ಎಸ್.ಎಸ್.ಪುರಂ, ತುಮಕೂರು -೫೭೨ ೧೦೨.

**ತಂಪು ಪಟ್ಟಿಗಳು**

ಎಲ್ಲಾ ಆಧುನಿಕ ಚಿಕಿತ್ಸಾ ಪದ್ಧತಿಗಳಲ್ಲೂ ತಣ್ಣೀರಿನ ಪಟ್ಟಿಗಳನ್ನು ಉಪಯೋಗಿಸಿಕೊಳ್ಳಲಾಗುತ್ತಿದೆ. ಕೆಲವರು ಪ್ರಥಮ ಚಿಕಿತ್ಸೆಯಾಗಿ ಮತ್ತೆ ಕೆಲವರು ಪೂರ್ಣ ಚಿಕಿತ್ಸೆಯಾಗಿ, ಮುಖ್ಯವಾಗಿ ಇದು ಮೊದಲ ಮನೆಮದ್ದು. ಸುಸ್ತಿರಬಹುದು, ಸಂಕಟವಿರಬಹುದು, ತೀವ್ರರೋಗವಿರಬಹುದು, ದೀರ್ಘರೋಗವಿರಬಹುದು, ತಲೆಯ ನೋವಿರಬಹುದು, ಹೊಟ್ಟೆಯಾ ನೋವಿರಬಹುದು, ಜ್ವರ ಬಂದಿರಬಹುದು, ಮಲಬದ್ಧತೆ ಇರಬಹುದು, ಮೂಲವ್ಯಾಧಿಯಾಗಿರಬಹುದು, ಮೂಗು ಪೆಟ್ಟಾಗಿರಬಹುದು, ಮೂಳೆ ಮುರಿದಿರಬಹುದು, ಶರೀರದಲಿ ಉಷ್ಣ ಹೆಚ್ಚಿರಬಹುದು, ಶೀತವಾಗಿರಬಹುದು, ಊತವಿರಬಹುದು, ಎಲ್ಲಾ ಕಾಯಿಲೆಗಳಿಗೂ, ಎಲ್ಲಾ ದೇಶಕ್ಕೂ, ಎಲ್ಲಾ ವಾತಾವರಣದಲ್ಲೂ ಸಹಾಯಕ್ಕೆ ಬರುತ್ತವೆ ಈ ಪಟ್ಟಿಗಳು, ಮುಖ್ಯವಾಗಿ ನೋವಿನಲ್ಲಿ ಇದರ ಉಪಯೋಗ ಹೆಚ್ಚು. ಇಂತಹ ಸಾರ್ವತ್ರಿಕವಾದ ಚಿಕಿತ್ಸೆಯ ಜನಕನನ್ನು ಯಾರೂ ನೆನೆಸಿಕೊಳ್ಳುವುದಿಲ್ಲ. ಸೃಷ್ಟಿಯ ಆದಿಯಿಂದಲೂ ಇದನ್ನು ಉಪಯೋಗಿಸಲಾಗುತ್ತಿದೆ. ಇದನ್ನು ಪೂರ್ಣ ಚಿಕಿತ್ಸೆಯಾಗಿ ಬಳಸಲು ಹೆಚ್ಚು ಒತ್ತು ಕೊಟ್ಟವನು ಪ್ರಿಸ್ನಿಟ್ಜ್, ಆಧುನಿಕ ಪ್ರಕೃತಿ ಚಿಕಿತ್ಸೆಯ ಪಿತಾಮಹ.

'No doctor now a days can dispense with these body bandages of Priesnitz and yet he is called an ignorant quack!' -ಈಗ ಯಾವ ವೈದ್ಯನೂ ಸಹ ಪ್ರಿಸ್ನಿಜ್‌ನ ತಂಪು ಪಟ್ಟಿಗಳನ್ನು ಬಿಟ್ಟಿರಲಾರ. ಆದರೆ, ಅವನನ್ನು ನಾಟಿ ವೈದ್ಯನೆಂದು ಕರೆದರು. - Prof. Dr. Sehweniger, Prince Bismark's Medical Attendant.

ಸಾರ್ವಕಾಲಿಕವಾದ, ಸಾರ್ವದೇಶಿಕವಾದ, ಬಹಳ ಸುಲಭವಾದ ಈ ಪಟ್ಟಿಗಳ ಉಪಯೋಗವನ್ನು ಮಾಡಿಕೊಳ್ಳುವುದು ಬುದ್ಧಿವಂತಿಕೆಯಲ್ಲವೇ? ಈ ಪಟ್ಟಿಗಳಲ್ಲಿ ಎರಡು ವಿಧ-ತಂಪು ಪಟ್ಟಿ, ಪ್ರಚೋದಕ ಪಟ್ಟಿ.

**ತಂಪು ಪಟ್ಟಿ :**

ಶರೀರದ ಯಾವ ಭಾಗದಲ್ಲಿಯಾಗಲಿ ನೋವಿದ್ದರೆ ಆ ಜಾಗದಲ್ಲಿ ಶಾಖವಿರುವುದು ಸಹಜ. ಮುಂದೆ ಆ ಜಾಗಕ್ಕೆ ಮಣ್ಣುಪಟ್ಟಿಯನ್ನು ಹೇಳುತ್ತೇವೆ. ಆದರೆ, ಎಲ್ಲಾ ಜಾಗಗಳಿಗೂ, ಎಲ್ಲಾ ವೇಳೆಯಲ್ಲೂ ಮಣ್ಣು ಪಟ್ಟಿಯನ್ನು ಹಾಕಲು ಆಗುವುದಿಲ್ಲ. ಉದಾಹರಣೆಗೆ ಜ್ವರ ಬಂದಿರುವಾಗ ಮೈಗೆಲ್ಲಾ ಮಣ್ಣು ಪಟ್ಟಿ ಹಾಕಲಾಗುವುದಿಲ್ಲ. ಆದ್ದರಿಂದ ತಂಪು ಪಟ್ಟಿಗಳು ಬಹಳ ಸಹಕಾರಿ. ಯಾವ ವೇಳೆಯೇ ಆಗಿರಲಿ, ಶರೀರದ ಯಾವ ಭಾಗಕ್ಕೇ ಆಗಲಿ ತಂಪು ಪಟ್ಟಿಯನ್ನು ಹಾಕಬಹುದು.

**ಹಾಕುವ ವಿಧಾನ :** ಒಂದು ದಪ್ಪ ಖಾದಿ ಅಥವಾ ಹತ್ತಿಯ ಬಟ್ಟೆಯನ್ನು ತೆಗೆದುಕೊಂಡು, ಅದು ಹಳೆಯ ಬಟ್ಟೆಯಾಗಿದ್ದಲ್ಲಿ ಉತ್ತಮ, ಅದನ್ನು ತಣ್ಣೀರಿನಲ್ಲಿ ನೆನೆಸಿ ಪೂರ್ಣವಾಗಿ ಹಿಂಡದೆ, ಸ್ವಲ್ಪ ನೀರು ಹಾಗೆಯೇ ಇರುವಂತೆ ಹಿಂಡಿ, ನೋವಿರುವ ಜಾಗಕ್ಕೆ ಕಟ್ಟಬೇಕು. ೧೫ರಿಂದ ೨೦ ನಿಮಿಷ ಹಾಗೆಯೇ ಬಿಟ್ಟಿದ್ದರೆ ಸಾಕು.

**ಪ್ರಚೋದಕ ಪಟ್ಟಿ :**

ಹಳೆಯ ರೋಗಿಗಳು ಹಾಗೂ ವಯಸ್ಸಾದವರಲ್ಲಿ ಶರೀರದ ಕೆಲವು ಅಂಗಗಳು ಸರಿಯಾಗಿ ಕೆಲಸ ಮಾಡುತ್ತಿರುವುದಿಲ್ಲ. ಅವುಗಳನ್ನು ತಣ್ಣೀರಿನ ಮುಖಾಂತರ ಪ್ರಚೋದಿಸಬೇಕು. ಅದಕ್ಕಾಗಿ ಈ ಪ್ರಚೋದಕ ಪಟ್ಟಿಯನ್ನು ಉಪಯೋಗಿಸಲಾಗುತ್ತದೆ. ತಂಪು ಪಟ್ಟಿಯಲ್ಲಿ ಅಂಗದ ಹೆಚ್ಚಿದ್ದ ಶಾಖವನ್ನು ಕಡಿಮೆ ಮಾಡಲಾಗುತ್ತದೆ. ಅದೇ ಪ್ರಚೋದಕ ಪಟ್ಟಿಯಲ್ಲಿ ಹೆಚ್ಚಿದ್ದ ಶಾಖವನ್ನು ಕಡಿಮೆ ಶಾಖವಿರುವ ಅಂಗಗಳಿಗೆ ಹಂಚಲಾಗುತ್ತದೆ.

**ಹಾಕುವ ವಿಧಾನ :** ಒಂದು ತೆಳ್ಳಗಿನ ಹತ್ತಿಯ ಬಟ್ಟೆಯನ್ನು ತಣ್ಣೀರಿನಲ್ಲಿ ನೆನೆಸಿ, ಚೆನ್ನಾಗಿ ಹಿಂಡಿ, ತೊಂದರೆಗೊಳಗಾದ ಜಾಗಕ್ಕೆ ಕಟ್ಟಿ, ಅದರ ಮೇಲೆ ಒಂದು ಉಲ್ಲನ್ ಬಟ್ಟೆಯನ್ನು ಬಿಗಿಯಾಗಿ ಕಟ್ಟಬೇಕು. ಅನೇಕ ಗಂಟೆಗಳು ಹೀಗೆಯೇ ಇರಬೇಕು.

ಈ ಎರಡರಲ್ಲಿ ಯಾವ ರೀತಿಯ ಪಟ್ಟಿಯನ್ನು ಯಾವಾಗ ಹಾಕಬೇಕು? ಅವುಗಳ ಹೆಸರುಗಳೇ ಅದನ್ನು ತಿಳಿಸುತ್ತದೆ. ಶರೀರದ ಶಾಖವನ್ನು ಕಡಿಮೆಮಾಡಲು ತಂಪು ಪಟ್ಟಿ ಅದೇ ಶರೀರದ ಅಂಗಾಂಗಗಳನ್ನು ಪ್ರಚೋದಿಸಲು ಪ್ರಚೋದಕ ಪಟ್ಟಿ.

ಈ ರೀತಿಯ ಪಟ್ಟಿಗಳಿಗಿರುವ ವ್ಯತ್ಯಾಸಗಳು ಹೀಗಿವೆ.

| **ತಂಪು ಪಟ್ಟಿ** | **ಪ್ರಚೋದಕ ಪಟ್ಟಿ** |
|---|---|
| ೧.ತೀವ್ರ ಕಾಯಿಲೆಗಳಲ್ಲಿ | ೧.ದೀರ್ಘ ಕಾಯಿಲೆಗಳಲ್ಲಿ |
| ೨. ದಪ್ಪ ಪದರದ ಬಟ್ಟೆಯ ಉಪಯೋಗ | ೨. ತೆಳುವಾದ ಬಟ್ಟೆ |
| ೩. ಪೂರ್ಣವಾಗಿ ಹಿಂಡ ಬಾರದು | ೩. ಚೆನ್ನಾಗಿ ಹಿಂಡಬೇಕು |
| ೪. ಸಡಿಲವಾಗಿ ಸುತ್ತುವುದು | ೪.ಬಿಗಿಯಾಗಿ ಸುತ್ತುವುದು |
| ೫. ಹೊರಗಡೆಯ ಗಾಳಿಗೆ ಬಿಡುವುದು | ೫.ಉಣ್ಣೆಯ ಬಟ್ಟೆಯನ್ನು ಕಟ್ಟುವುದರಿಂದ ಗಾಳಿಯನ್ನು ತಾನಾಗಿಯೇ ತಡೆಯುವುದು. |
| ೬. ಕೆಲವು ನಿಮಿಷಗಳ ಪ್ರಯೋಗ. ಆಗಾಗ ಪುನರಾವರ್ತನೆ | ೬. ಅನೇಕ ಘಂಟೆಗಳು |
| ೭. ದೇಹದ ಉಷ್ಣತೆಯನ್ನು ಕಡಿಮೆ ಮಾಡುತ್ತದೆ. | ೭. ದೇಹದ ಉಷ್ಣತೆಯನ್ನು ಹೆಚ್ಚಿಸುತ್ತದೆ. |

ಆಯಾ ಸನ್ನಿವೇಶಗಳಿಗನುಸರಿಸಿ ಯಾವ ಪಟ್ಟಿಯನ್ನು ಉಪಯೋಗಿಸಬೇಕೆಂಬುದನ್ನು ನಿರ್ಧರಿಸಬೇಕು. ಕೆಳಗಿನವು ಕೆಲವು ಉದಾಹರಣೆಗಳಷ್ಟೇ.

**ಪೂರ್ಣ ಶರೀರಕ್ಕೆ ಪ್ರಚೋದಕ ಪಟ್ಟಿ :**

ಚಾಪೆಯ ಮೇಲಾಗಲಿ, ಮಂಚದ ಮೇಲಾಗಲಿ ಒಂದು ಉಣ್ಣೆಯ ರಗ್ಗನ್ನಾಗಲೀ, ಕಂಬಳಿಯನ್ನಾಗಲಿ ಹಾಸಬೇಕು. ಅದರ ಮೇಲೆ ಒಂದು ತೆಳುವಾದ ಹತ್ತಿಯ ಪಂಚೆ ಅಥವಾ ಸೀರೆಯನ್ನು ಎರಡು ಪದರಕ್ಕೆ ಮಡಿಸಿ ತಣ್ಣೀರಿನಲ್ಲಿ ನೆನೆಸಿ ಚೆನ್ನಾಗಿ ಹಿಂಡಿ ಅದನ್ನು ಹಾಸಬೇಕು. ಇದರ ಮೇಲೆ ರೋಗಿಯನ್ನು ವಿವಸ್ತ್ರವಾಗಿ ಮಲಗಿಸಬೇಕು. ಕತ್ತಿನಿಂದ, ಕಾಲಿನವರೆವಿಗೂ ಸುತ್ತಬೇಕು. ಗಾಳಿಯು ಕೊಂಚವೂ ಒಳಕ್ಕೆ ಹೋಗದಂತೆ ಎಚ್ಚರಿಕೆ ವಹಿಸಬೇಕು. ತಲೆಗೆ ತಣ್ಣೀರಿನ ಪಟ್ಟಿಯನ್ನು ಕಟ್ಟಬೇಕು. ಅದರ ಮೇಲೆ ಮಫ್ಲರ್ ಸುತ್ತಬೇಕು. ಮೊದಲು ಚಳಿಯ ಅನುಭವ, ತಕ್ಷಣವೇ ಬೆಚ್ಚಗಾಗುವುದು. ನಂತರ ಬೆವರುವುದು. ಸುಮಾರು ಒಂದು ಗಂಟೆಯ ಕಾಲ ಹಾಗೆಯೇ ಬಿಟ್ಟಿರ ಬಹುದು. ಈ ಪಟ್ಟಿಯನ್ನು ಜ್ವರದಲ್ಲಿ ದಿನಕ್ಕೆ ಎರಡು ಸಲ ಹಾಕುವುದರಿಂದ ಮೈ ಬೆವರಿ ಜ್ವರ ಬಿಡುತ್ತದೆ. –ಮುಂದುವರೆಯುತ್ತದೆ.

## ರಸಜ್ಞನ ವಚನಗಳು

ಸಾಧನೆಯಿಲ್ಲದೆ ಸಿದ್ಧಿಯಿಲ್ಲ
ಬೋಧನೆಯಿಲ್ಲದೆ ಬುದ್ಧಿಯಿಲ್ಲ
ನೀತಿಯಿಲ್ಲದೆ ಪ್ರೀತಿಯಿಲ್ಲ
ಯೋಗವಿಲ್ಲದೆ ಭೋಗವಿಲ್ಲ
ದಯೆಯಿಲ್ಲದೆ ಧರ್ಮವಿಲ್ಲ
ಹಟವಿಲ್ಲದೆ ಹವ್ಯಾಸವಿಲ್ಲ
ಗುರುವಿಲ್ಲದೇ ಗುರಿಯಿಲ್ಲ
ಪ್ರತ್ಯಕ್ಷವಿಲ್ಲದೇ ಪ್ರಮಾಣವಿಲ್ಲವಯ್ಯಾ ರಸಜ್ಞ

* * *

ಮಾತುಗಳನ್ನಾಡಬೇಕೆಂದಾಗ
ನಿನ್ನಾತ್ಮ ಒಪ್ಪುವಂತೆ ಮಾತಾಡು
ನಿರರ್ಥಕ ಮಾತುಗಳಿಗಿಂತ
ಮೌಲ್ಯಯುತವಾಗಿ ಮಾತಾಡು
ಸಂದಿಗ್ಧತೆ ಬಂದೊದಗಿದಾಗ
ಕೊಂಕು ನುಡಿಯದೇ ಅರಿತು ಮಾತಾಡು
ಮಾತೇ ಮಂತ್ರವಾಗಲಿ
ಮಾತೇ ದೀಕ್ಷೆಯಾಗಲಿ
ಮಾತಿನೊಳಗೆ ಮಹತ್ವ ಅಡಗಿರಲಯ್ಯ ರಸಜ್ಞ

* * *

ಧನ ಧಾನ್ಯ ಸ್ತ್ರೀ ಪುತ್ರ ಸ್ಥಿರವಲ್ಲ ನೋಡಾ !
ಎಲ್ಲ ಭೋಗೈಶ್ವರ್ಯ ಗಳಿಸಿದ್ದರೂ
ಶಾಶ್ವತರಾರೂ ಇಲ್ಲ ನೋಡಾ
ಇರಬೇಕು ಇಲ್ಲದಂತಿರಬೇಕು
ಕೆಸರಿನೊಳು ಕಮಲದಂತೆ ನೋಡಾ !
ಭವಬಂಧನದಿ ಪಾರಾಗಲು
ಆಧ್ಯಾತ್ಮದ ಹಾದಿಯಿದೆ ನೋಡಾ ರಸಜ್ಞ

–ಡಾ॥ ರಾಜಶೇಖರ ಜಮದಂಡಿ,
ಚಾಮರಾಜನಗರ



ತುಮಕೂರಿನ ಪ್ರಜಾಪತ್ರಿಕೆಯ ಕಾರ್ಯಾಲಯಕ್ಕೆ ಪೂಜ್ಯ ಶ್ರೀಗಳು ಭೇಟಿ ನೀಡಿ ಅತಿಥಿ ಸಂಪಾದಕರಾಗಿ ಕಾರ್ಯನಿರ್ವಹಿಸಿದರು. ಈ ಸಂದರ್ಭದಲ್ಲಿ ಹಿರಿಯ ಪತ್ರಕರ್ತರಾದ ಡಾ. ಪಾಟೀಲ ಪುಟ್ಟಪ್ಪ, ಶ್ರೀ ಎಸ್.ವಿ. ಜಯಶೀಲರಾವ್ ಹಾಗೂ ಡಾ. ಸಿ. ಸೋಮಶೇಖರ್ ಅವರು ಉಪಸ್ಥಿತರಿದ್ದರು




ತುಮಕೂರಿನ ಸಿದ್ಧಗಂಗಾ ಪಾಲಿಟೆಕ್ನಿಕ್ ಕಾಲೇಜಿನಲ್ಲಿ ಇತ್ತೀಚೆಗೆ ಏರ್ಪಡಿಸಿದ್ದ ನೂತನ ವಿದ್ಯಾರ್ಥಿಗಳ ಸ್ವಾಗತ ಸಮಾರಂಭವನ್ನು ಪೂಜ್ಯ ಶ್ರೀಗಳವರು ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು




ನಿಟ್ಟೂರಿನಲ್ಲಿ ನಡೆದ ಗ್ರಾಮಾಂತರ ಬಸವ ಜಯಂತಿ ಹಾಗೂ ಧಾರ್ಮಿಕ ಸಮಾರಂಭವನ್ನು ಪೂಜ್ಯ ಶ್ರೀಗಳವರು ಉದ್ಘಾಟಿಸಿದರು. ಈ ಸಂದರ್ಭದಲ್ಲಿ ವಿವಿಧ ಮಠಗಳ ಹರಗುರು ಚರಮೂರ್ತಿಗಳು ಉಪಸ್ಥಿತರಿದ್ದರು



ಶ್ರೀಮಠದ ಆವರಣದಲ್ಲಿ ಅರಣ್ಯ ಇಲಾಖೆ ವತಿಯಿಂದ ಏರ್ಪಡಿಸಿದ್ದ "ಬಕುಳವನ" ನಿರ್ಮಿಸುವ ಕಾರ್ಯಕ್ರಮಕ್ಕೆ ಪೂಜ್ಯ ಶ್ರೀಗಳವರು ಸಸಿ ನಡೆವುದರ ಮೂಲಕ ಚಾಲನೆ ನೀಡಿದರು



ಸಿದ್ಧಗಂಗಾ ಮಹಿಳಾ ಕಾಲೇಜಿನಲ್ಲಿ ಕಲ್ಯಾಣ ಪ್ರಕಾಶನ ಆಯೋಜಿಸಿದ್ಧ ಪ್ರೊ. ಎಸ್. ಸುಮಂಗಲಮ್ಮನವರ ವಿಮರ್ಶಾ ಕೃತಿಯನ್ನು ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳವರು ಲೋಕಾರ್ಪಣೆ ಮಾಡಿದರು



ತುಮಕೂರಿನಲ್ಲಿ ನಡೆದ ವಾಸವಿ ಜಯಂತಿಯ ಸಮಾರೋಪ ಸಮಾರಂಭವನ್ನು ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳವರು ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಸಂಘದ ಪದಾಧಿಕಾರಿಗಳು ಉಪಸ್ಥಿತರಿದ್ದರು

Cover printed at : Geetanjali Graphics, # 4, M.S.R. Indl. Estate, Bangalore-54, Ph : 2360…